'ಸಿದ್ಧಗಂಗಾ' ಚಿರಾಯುವಾಗಲೆಂದು ಹರಸಿ ಹಾರೈಸಿರುವ
ಆಜೀವ ಸದಸ್ಯರ ಬಳಗಕ್ಕೆ ಕೃತಜ್ಞತೆಗಳು.

880 ಶ್ರೀಮತಿ ಎಂ. ಸುಶೀಲಮ್ಮ
ಮನುಹಳ್ಳಿ
ಡೆಂಕಣ ಕೋಟೆ ॥ತಾ॥
ಧರ್ಮಪುರಿ ॥ಜಿಲ್ಲೆ॥
ತಮಿಳುನಾಡು.

881 ಶ್ರೀ ಎಸ್. ಶಿವನಂಜಪ್ಪ
ಶಿರಮಳ್ಳಿ
ನಂಜನಗೂಡು ॥ತಾ॥
ಮೈಸೂರು ಜಿಲ್ಲೆ.

882 ಶ್ರೀ ಸಿದ್ಧಲಿಂಗಪ್ಪ
ಜಿ. ಇ. ಎಫ್. ಬ್ಲಾಕ್,
ಇಂಡಸ್ಟ್ರಿಯಲ್ ಟೌನ್,
ಬೆಂಗಳೂರು-44

883 ಶ್ರೀ ಪ್ರಭುಸ್ವಾಮಿ.
ಬ್ಲಾಕ್ ಡೆವಲಪ್‌ಮೆಂಟ್.
ಆಫೀಸ್, ಸಕಲೇಶಪುರ
ಹಾಸನ ಜಿಲ್ಲೆ

884 ಶ್ರೀ ಎಸ್. ರೇವಣಸಿದ್ಧಪ್ಪ
ರಾಜಾಜಿ ನಗರ,
6 ನೇ ಬ್ಲಾಕ್
ಬೆಂಗಳೂರು-10

885 ಶ್ರೀ ಬಿ. ಜಿ. ನಾಗಬಸಪ್ಪ
ಪ್ರೊ॥ ಗಿರಿಜಾ ಪ್ರಾವಿಷನ್
ಸ್ಟೋರ್ಸ್, ವಿಜಯನಗರ,
ಬೆಂಗಳೂರು-40

866 ಶ್ರೀ ಬಿ. ಹೆಚ್. ಮುದ್ದಯ್ಯ
4 ನೇ ಬ್ಲಾಕ್
ರಾಜಾಜಿನಗರ,
ಬೆಂಗಳೂರು-10

887 ಶ್ರೀಮತಿ ಶಿವಮ್ಮ
ರಾಜಾಜಿನಗರ,
5 ನೇ ಬ್ಲಾಕ್
ಬೆಂಗಳೂರು-10

888 ಶ್ರೀ ಸಿದ್ಧಲಿಂಗೇಶ್ವರ ರೆಸಿ
ಡೆನ್ಸಿಯಲ್. ಪ್ರೌಢಶಾಲೆ,
ಶ್ರೀ ಸಿದ್ಧಗಂಗಾ ಮಠ
ತುಮಕೂರು ಜಿಲ್ಲೆ

889 ಶ್ರೀ ಎಲ್. ನಾಗಣ್ಣ s/o
ಎಸ್. ಎಂ. ಲಿಂಗಪ್ಪ
ಮರ್ಚೆಂಟ್ಸ್,
ಮಾಧವಚಾರ್ ಬೀದಿ.
ಮೈಸೂರು-4

(ಮುಂದುವರಿಯುತ್ತದೆ)

## ಹದಿನೆಂಟರ ಹೊಸ್ತಿಲಲ್ಲಿ "ಸಿದ್ಧಗಂಗಾ"

ಪರಮ ಪೂಜ್ಯ ಡಾ॥ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರ ಅನುಗ್ರಹದಿಂದ 'ಸಿದ್ಧಗಂಗಾ' ಮಾಸ ಪತ್ರಿಕೆ 17 ವರ್ಷಗಳು ಯಶಸ್ವಿಯಾಗಿ ಮುನ್ನಡೆದು 18 ನೆಯ ವರ್ಷಕ್ಕೆ ಪಾದಾರ್ಪಣೆ ಮಾಡುತ್ತಿರುವ ಈ ಶುಭ ಸಂದರ್ಭದಲ್ಲಿ ಮಾನ್ಯ ಓದುಗರಿಗೆ ಅನಂತ ವಂದನೆಗಳು.

## ಅಧಿಕ ಸಂಖ್ಯೆಯಲ್ಲಿ ಪ್ರಸಾರ

'ಸಿದ್ಧಗಂಗಾ' ಐದು ಸಹಸ್ರಕ್ಕೂ ಮೀರಿ ನಾಡಿನ ಉದ್ದಗಲಕ್ಕೂ ಸಂಚರಿಸಿ ಓದುಗರ ಕೈ ಸೇರುತ್ತಿದೆ. ಈ ಪ್ರಸಾರ ಕಾರ್ಯದಲ್ಲಿ ನಾಡಿನಾದ್ಯಂತ ಶ್ರೀ ಮಠದ ಅಭಿಮಾನಿಗಳು, ಹಿತೈಷಿಗಳು, ಮತ್ತು ಹಳೆಯ ವಿದ್ಯಾರ್ಥಿಗಳು ಸ್ಫೂರ್ತಿಯುತ ಸಹಕಾರ ನೀಡುತ್ತಿದ್ದಾರೆ ಅವರೆಲ್ಲರಿಗೂ ಹೃತ್ಪೂರ್ವಕ ವಂದನೆಗಳು.

## ಸ್ಮರಣೀಯ ಸೇವೆ

ಅಧಿಕ ಪ್ರಸಾರಕ್ಕೆ ಯಾವ ಪ್ರತಿಫಲವಿಲ್ಲದೆ ಆಯಾ ಪ್ರದೇಶಗಳಲ್ಲಿ ವಿಶೇಷವಾಗಿ ಶ್ರಮಿಸಿ ಹೆಚ್ಚು ಮಂದಿ ಓದುಗರನ್ನು ಮತ್ತು ಆಜೀವ ಸದಸ್ಯರುಗಳನ್ನು ಮಾಡಿದ ಈ ಆತ್ಮೀಯ ಬಂಧುಗಳಿಗೆ ಶ್ರೀ ಕ್ಷೇತ್ರದ ಪರವಾಗಿ ಕೃತಜ್ಞತೆಗಳು.

ಶ್ರೀ ಕೆ. ಎಸ್. ಬಸವಲಿಂಗಪ್ಪ, ಮೈಸೂರು.
ಶ್ರೀ ಸಿ. ಬಿ. ಶಂಕರಪ್ಪ, ದೇವನಹಳ್ಳಿ, ಬೆಂಗಳೂರು ಜಿಲ್ಲೆ.
ಶ್ರೀ ಎಂ. ಬಸವಯ್ಯ ಮುಖ್ಯೋಪಾಧ್ಯಾಯರು, ಸರ್ಕಾರಿ ಉ. ಪ್ರಾ. ಶಾಲೆ. ಗುಬ್ಬಿ
ಶ್ರೀಮತಿ ಗಿರಿಜಾದೇವಿ ನಂಜುಂಡಪ್ಪ, ಕೆಸ್ತೂರು, ತುಮಕೂರು ॥ ತಾ ॥
ಶ್ರೀ ಸಿದ್ದಲಿಂಗಪ್ಪ, ತುಂಬುಸೋಗೆ, ಮೈಸೂರು ಜಿಲ್ಲೆ.
ಶ್ರೀ ಎಸ್. ನಾಗೇಶಪ್ಪ, ಪ್ರಿನ್ಸಿಪಾಲ್, ಗೌ॥ ಪಾಲಿಟೆಕ್ನಿಕ್, ಬಿಜಾಪುರ.
ಶ್ರೀ ಟಿ. ಬಿ. ವಿರೂಪಾಕ್ಷಯ್ಯ, ರಾಜಾಜಿನಗರ, ಬೆಂಗಳೂರು – 10
ಶ್ರೀ ಬಿ. ವಿರೂಪಾಕ್ಷಯ್ಯ, ಜಯನಗರ, ಬೆಂಗಳೂರು – 11
ಶ್ರೀ ಕೆ. ಬಿ. ವೀರಣ್ಣ, ತಹಸೀಲ್ದಾರ್, ಕಾರ್ಕಳ, ದ. ಕ. ಜಿಲ್ಲೆ.
ಶ್ರೀ ಬಸವರಾಜಪ್ಪ, ಲಕ್ಷ್ಮೀಪುರ, ನೆಲಮಂಗಲ ॥ತಾ॥ ಬೆಂಗಳೂರು ಜಿಲ್ಲೆ.
ಶ್ರೀ ಟಿ. ಗುರುದೇವಪ್ಪ, ಹಿರೇಬೆಳಗುಲಿ, ಹಾಸನ ಜಿಲ್ಲೆ.
ಶ್ರೀ ಎಂ. ಪಿ. ಸದಾಶಿವಯ್ಯ, ಅಸಿಸ್ಟೆಂಟ್ ಇಂಜಿನಿಯರ್ ಹಿಡಕಲ್‌ಡ್ಯಾಮ್, ಬೆಳಗಾಂ ಜಿಲ್ಲೆ.
ಶ್ರೀ ಬಿ. ಎಸ್. ಪುಟ್ಟಸ್ವಾಮಿ, ಅಸಿಸ್ಟೆಂಟ್ ಇಂಜಿನಿಯರ್, ಧಾರವಾಡ.

ಶ್ರೀ ಜಿ. ಎಸ್. ಶಿವಣ್ಣ, ಮರ್ಚೆಂಟ್, ಯಲಚೇನಹಳ್ಳಿ, ಬೆಂಗಳೂರು-61
ಶ್ರೀ ವೈ. ಮಲ್ಲಯ್ಯ ಸ್ವಾಮಿ, ಹಟ್ಟಿಗೋಲ್ಡ್‌ಮೈನ್ಸ್, ರಾಯಚೂರು ಜಿಲ್ಲೆ.
ಶ್ರೀ ಆನಂದಪ್ಪ, ಬಿ.ಇ.ಎಂ.ಎಲ್, ಕೆ. ಜಿ. ಎಫ್.
ಶ್ರೀ ಹೆಚ್. ಡಿ. ತಿಮ್ಮಪ್ಪ, ಉಪನ್ಯಾಸಕರು, ಗೌ॥ ಜೂನಿಯರ್ ಕಾಲೇಜ್,
ಬಾಣಾವರ, ಅರಸೀಕೆರೆ ॥ ತಾ ॥
ಶ್ರೀ ಎಂ. ಗುರುಸಿದ್ದಪ್ಪ, ವಿಲ್‌ಸನ್‌ಗಾರ್ಡನ್, ಬೆಂಗಳೂರು-27
ಶ್ರೀ ಹೆಚ್. ಡಿ. ರೇಣುಕುಮಾರ್, ಚಾಮರಾಜಪೇಟೆ, ಬೆಂಗಳೂರು-18
ಶ್ರೀ ಹೆಚ್. ಸಿ. ನಂಜುಡಯ್ಯ, ಬಂಡಿಗುಡ್ಡ, ಭದ್ರಾವತಿ.
ಶ್ರೀ ಹೆಚ್. ಸಿ. ಬಸವರಾಜು, ಗೌ॥ ಪ್ರೆಸ್, ಬೆಂಗಳೂರು.
ಶ್ರೀ ಎಂ. ಡಿ. ನಂಜುಂಡಪ್ಪ, ಮರ್ಚೆಂಟ್, ದೇವನಹಳ್ಳಿ, ಬೆಂಗಳೂರು ಜಿಲ್ಲೆ.
ಶ್ರೀ ಶ್ರೀ ಜಯಚಂದ್ರಶೇಖರ ಸ್ವಾಮಿಗಳು, ಕೇದಿಗೆಮಠ, ಹಾಸನ ಜಿಲ್ಲೆ.
ಶ್ರೀ ಎನ್. ವಿ. ರಾಜು, ಭದ್ರಾವತಿ.
ಶ್ರೀ ಬಿ. ಬಿ. ನಂಜುಂಡಯ್ಯ, ಬೆಳ್ಳರಹಳ್ಳಿ, ಉತ್ತರ ಕೊಡಗು.
ಶ್ರೀ ಸಿ. ಎಸ್. ದೇವರಾಜ್, ಬಿ.ಎಸ್ಸಿ.,ಬಿ.ಇಡಿ, ಬಿದರೆ, ಗುಬ್ಬಿ ತಾ॥
ಶ್ರೀ ಎನ್. ಹೆಚ್. ರೇವಣಸಿದ್ದಪ್ಪ, ಬಾಗಲೂರು, ಬೆಂಗಳೂರು ಜಿಲ್ಲೆ.
ಶ್ರೀ ಎಸ್. ಎಂ. ನಾಗರಾಜಪ್ಪ, ಕೆ.ಇ.ಬಿ, ಸಿಂಧನೂರು, ರಾಯಚೂರು ಜಿಲ್ಲೆ.
ಶ್ರೀ ಬಿ. ರಾಜಶೇಖರಪ್ಪ, ಬಿಸೂರೆ, ಚಿಕ್ಕಮಗಳೂರು ಜಿಲ್ಲೆ.
ಶ್ರೀ ಎನ್. ರಂಗೇಗೌಡ, ಶಿಕ್ಷಕರು, ಹೊನ್ನೇಬಾಗಿ, ತುಮಕೂರು ಜಿಲ್ಲೆ.
ಶ್ರೀ ಹೆಚ್. ಆರ್. ಮುದ್ದಗಂಗಯ್ಯ, ಸಿಂಡಿಕೇಟ್ ಬ್ಯಾಂಕ್, ಬೆಂಗಳೂರು-45
ಶ್ರೀ ಎಲ್. ಶಿವಕುಮಾರ್, ಕೆ.ಇ.ಬಿ, ಚಿಕ್ಕಬಳ್ಳಾಪುರ, ಕೋಲಾರ ಜಿಲ್ಲೆ.
ಶ್ರೀ ಎಂ. ಟಿ. ಮಂಚಯ್ಯ, ಆರ್.ಟಿ.ಓ. ಆಫೀಸ್, ಹಾಸನ.
ಶ್ರೀ ಈರಯ್ಯ, ಅನುವಾಳು, ಪಾಂಡವಪುರ ತಾ॥ ಮಂಡ್ಯ ಜಿಲ್ಲೆ.
ಶ್ರೀ ಡಿ. ಬಿ. ನಾಗರಾಜಯ್ಯ, ಶಿಕ್ಷಕರು, ಕುದೂರು, ಬೆಂಗಳೂರು ಜಿಲ್ಲೆ.
ಶ್ರೀ ಟಿ. ಪಿ. ಪ್ರಭುದೇವ್, ಸರ್ವೇಯರ್, ಮಂಡ್ಯ.
ಶ್ರೀ ಎಸ್. ರುದ್ರಪ್ಪ, ಆಸ್ಟ್ರಾಲಜರ್, ಮಲ್ಲೇಶ್ವರಂ, ಬೆಂಗಳೂರು.
ಶ್ರೀ ಜಿ. ಆರ್. ರಾಜಶೇಖರಯ್ಯ, ಶಿಕ್ಷಕರು, ಮಹದೇಶ್ವರಬೆಟ್ಟ, ಮೈಸೂರು ಜಿಲ್ಲೆ.
ಶ್ರೀ ಕೆ. ಬಸವಯ್ಯ, ಸೂಲಿಕೆರೆ, ಬೆಂಗಳೂರು ಸೌತ್.
ಶ್ರೀ ಎಂ. ಆರ್. ಬೈಲಪ್ಪ, ನ್ಯಾಷನಲ್ ಹೈಸ್ಕೂಲ್, ಹೊಸೂರು, ಕೋಲಾರ ಜಿಲ್ಲೆ.
ಶ್ರೀ ವಿ. ಶಿವಮಲ್ಲಪ್ಪ, ಶೀಹಳ್ಳಿ, ಮೈಸೂರು ಜಿಲ್ಲೆ.
ಶ್ರೀ ಬಿ. ಚನ್ನಬಸಪ್ಪ, ಶಿಕ್ಷಕರು, ಬನ್ನೇರುಘಟ್ಟ, ಬೆಂಗಳೂರು-76
ಶ್ರೀ ಟಿ. ವಿ. ಪುಟ್ಟಣ್ಣ, ಶಿಕ್ಷಕರು, ಬಿಳಿಗೆರೆ, ತುಮಕೂರು ಜಿಲ್ಲೆ.

+



ಶ್ರೀ ವಿ. ಪಿ. ಗಂಗಣ್ಣ, ಕರ್ನಾಟಕ ಇಂಡಸ್ಟ್ರಿಯಲ್ ಕೋ ಆಪರೇಟಿವ್ ಬ್ಯಾಂಕ್.
ತುಮಕೂರು.
ಶ್ರೀ ಬಿ. ಸೋಮಶೇಖರ, ಕೆ. ಇ. ಬಿ. ಸಿಂಷಾಪುರ, ಮಂಡ್ಯ ಜಿಲ್ಲೆ.
ಶ್ರೀ ಎಸ್. ಮಹದೇವಪ್ಪ, ಅನುಗೊಂಡನಹಳ್ಳಿ, ತುಮಕೂರು ಜಿಲ್ಲೆ.
ಶ್ರೀ ಎಸ್. ಕಲ್ಲಪ್ಪ, ಶಿಕ್ಷಕರು, ಹುನಸೇಕಟ್ಟೆ, ದಾವಣಗೆರೆ, ॥ ತಾ ॥
ಶ್ರೀ ಪರಮಶಿವಯ್ಯ, ಶಿಕ್ಷಕರು, ಕರೀಕೆರೆ, ತುಮಕೂರು ಜಿಲ್ಲೆ.
ಶ್ರೀ ಸಿದ್ದಗಂಗಪ್ಪ, ಶಿಕ್ಷಕರು, ರಾಂಪುರ, ಕೋಲಾರ ಜಿಲ್ಲೆ.
ಶ್ರೀ ಸಿದ್ದಗಂಗಯ್ಯ, ಶಿಕ್ಷಕರು, ಜೋಡಿಕರೇನಹಳ್ಳಿ, ಬೆಂಗಳೂರು ಜಿಲ್ಲೆ.
ಶ್ರೀ ಜಿ. ಚಂದ್ರಶೇಖರಯ್ಯ, ಶಿಕ್ಷಕರು, ಬ್ಯಾಡರಹಳ್ಳಿ, ಬೆಂಗಳೂರು-23
ಶ್ರೀ ಹೆಚ್. ಬಿ. ಪುಟ್ಟಪ್ಪ, ಸ್ಟೇಟ್‌ಬ್ಯಾಂಕ್ ಆಫ್ ಮೈಸೂರು, ಕೋಲಾರ.
ಶ್ರೀ ಟಿ. ಹೆಚ್. ಶಿವಪ್ಪ, ಶಿಕ್ಷಕರು, ಬೇಲೂರು, ಶಿವಮೊಗ್ಗ ಜಿಲ್ಲೆ.
ಶ್ರೀ ಬಿ. ಕೆ. ತಿಮ್ಮೇಗೌಡ, ಮರ್ಚೆಂಟ್, ಕಾಚೇನಹಳ್ಳಿ, ತುಮಕೂರು ಜಿಲ್ಲೆ.

ಇನ್ನೂ ಅನೇಕ ಆತ್ಮೀಯ ಬಂಧುಗಳಿಗೆ ಅಭಿನಂದನೆಗಳು.

ವಾರ್ಷಿಕಚಂದಾ 15-00 ರೂಗಳು. ಆಜೀವ ಸದಸ್ಯತ್ವ ಚಂದಾ 151/ ರೂಗಳು. ಮಾನ್ಯ ಓದುಗರು ಎಂದಿನಂತೆ ಸಹಕರಿಸಿ ಪ್ರೋತ್ಸಾಹಿಸಿ 1982ನೇ ಸಾಲಿಗೆ ತಮ್ಮ ಚಂದಾವಂತಿಕೆಯನ್ನು ಮುಂದುವರಿಸುವುದರ ಮೂಲಕ ನಮ್ಮ ಸಹೃದಯ ಪ್ರತಿನಿಧಿಗಳಿಗೆ ನೆರವಾಗಬೇಕಾಗಿ ಮನವಿ ಮಾಡಿಕೊಳ್ಳುತ್ತೇವೆ.

ಪ್ರಕಾಶಕರು.

" ಸಿದ್ಧಗಂಗಾ ಶ್ರೀ " ಸಂಭಾವನಾ ಗ್ರಂಥ

1100 ಪುಟಗಳ ವರ್ಣರಂಜಿತ ಶ್ರೀ ಶ್ರೀಗಳವರ ಭಾವಚಿತ್ರಗಳೊಂದಿಗೆ ಡೆಮ್ಮಿ 1/4ರ ಆಕರ್ಷಕ ರಕ್ಷಾಪುಟ. ಸಹಸ್ರಾರು ಮಂದಿ ಪ್ರಸಿದ್ಧ ವಿದ್ವಾಂಸರುಗಳಿಂದ ಶ್ರೀ ಕ್ಷೇತ್ರ ದರ್ಶನ, ಕಲೆ, ಸಾಹಿತ್ಯಾತ್ಮಕ ಲೇಖನಗಳು.

ಮುಂಗಡ ಹಣ ಸಂದಾಯ ಮಾಡುವ ಹಳೆಯ ವಿದ್ಯಾರ್ಥಿಗಳಿಗೆ 75 ರೂ. ಅಭಿಮಾನಿಗಳಿಗೆ 101 ರೂಗಳು. ಕೊನೆಯ ದಿನಾಂಕ 1982 ಜನವರಿ 31

ಕಾರ್ಯದರ್ಶಿ. ಹಳೆಯ ವಿದ್ಯಾರ್ಥಿ ಸಂಘ ಶ್ರೀ ಸಿದ್ಧಗಂಗಾ ಮಠ 572104.

" ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿಗಳ ಅವಗಾಹನೆಗೆ "

ಹಳೆಯ ವಿದ್ಯಾರ್ಥಿಗಳ ಸಂಘ

ಶ್ರೀ ಸಿದ್ಧಗಂಗಾ ಗುರುಕುಲ : : ತುಮಕೂರು ಜಿಲ್ಲಾ

## ಸರ್ವಸದಸ್ಯರ ಮಹಾಧಿವೇಶನದ ಆಹ್ವಾನ ಪತ್ರಿಕೆ

ಪ್ರಿಯ ಮಿತ್ರರೇ,

ನಮ್ಮ ಸಂಘದ 27 ನೆಯ ಸರ್ವಸದಸ್ಯರ ಮಹಾಧಿವೇಶನವು 10-1-1982 ನೆಯ ಭಾನುವಾರ ಬೆಳಗಿನ 10-30 ಘಂಟೆಗೆ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ಸಮಾವೇಶಗೊಳ್ಳುವಂತೆ ಶ್ರೀ ಶ್ರೀಗಳವರ ಅಪ್ಪಣೆಯ ಮೇರೆಗೆ ಶೀವರ್ಾನಿಸಲಾಗಿದೆ. 1982 ನೇ ಏಪ್ರಿಲ್‌ನಲ್ಲಿ ನಡೆಯುವ ಶ್ರೀ ಶ್ರೀಗಳವರ ಸುವರ್ಣ ಮಹೋತ್ಸವದ ಮಹತ್ವದ ವಿಚಾರಗಳನ್ನು ಚರ್ಚಿಸುವ ಸಲುವಾಗಿ ತಾವೆಲ್ಲರೂ ಅಂದು ಗೆಳೆಯರೊಡನೆ ತಪ್ಪದೆ ಆಗಮಿಸಿ ತಮ್ಮ ಅಮೂಲ್ಯ ಸಲಹೆಗಳನ್ನಿತ್ತು ಅಧಿವೇಶನವನ್ನು ಯಶಸ್ವಿಗೊಳಿಸಬೇಕಾಗಿ ಕೋರುತ್ತೇವೆ. ಅನೇಕ ಮಿತ್ರರ ವಿಳಾಸಗಳು ತಿಳಿಯದಿರುವ ಕಾರಣ ಪತ್ರಗಳು ತಲುಪದಿರಬಹುದು, ಪತ್ರಗಳು ತಲುಪಿದ ಸದಸ್ಯರು ತಮಗೆ ತಿಳಿದಿರುವ ಹಳೆಯ ವಿದ್ಯಾರ್ಥಿಮಿತ್ರರನ್ನು ಕರೆತರುವ ಕೃಪೆಮಾಡಬೇಕಾಗಿ ವಿನಂತಿ. ಮಹಾಧಿವೇಶನಕ್ಕೆ ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಸದಸ್ಯರು ಆಗಮಿಸುವರಾಗಿ ಆಶಿಸಿದ್ದೇವೆ.

ಶ್ರೀ ಸಿದ್ಧಗಂಗಾ ಕ್ಷೇತ್ರ
ತಾ॥ 9-12-81

ತಮ್ಮ ವಿಶ್ವಾಸಿ,
ಎಂ. ಎನ್. ಚನ್ನಬಸಪ್ಪ
ಪ್ರಧಾನ ಕಾರ್ಯದರ್ಶಿ

# ಸಿದ್ಧಗಂಗಾ

ಸಂಪುಟ-೧೭ ಸಂಚಿಕೆ-೧೨ ಡಿಸೆಂಬರ್, ೧೯೮೧

ಭವಾಂಬೋಧಿನಾವಂ ಸದಾಶುದ್ಧಭಾವಂ
ಶಿವಂ ಶಾಂತಮೇಕಂ ಪರಿತ್ರಾತಲೋಕಂ ।
ಶಿವಾನಂದಲಿಂಗಂ ಶಿವಾದ್ವೈತಲಿಂಗಂ
ಪರಬ್ರಹ್ಮ ಲಿಂಗಂ ಭಜೇಸಿದ್ಧಲಿಂಗಂ ॥

★ ★ ★

ಹಾಲ ತೊರೆಗೆ ಬೆಲ್ಲದಂತಹ ಕೆಸರು,
ಸಕ್ಕರೆಯಂತಹ ಮಳಲು,
ತವರಾಜದಂತಹ ನೊರೆತೊರೆಗಳು.
ಇಂತಪ್ಪ ಆದ್ಯರ ವಚನವಿರಲು ಬೇರೆ ಬಾವಿಯ ತೋಡಿ
ಉಪ್ಪನೀರ ಸವಿದಂತಾಯಿತ್ತಯ್ಯ ಎನ್ನಯುಕ್ತಿ.
ನಿಮ್ಮ ವಚನಂಗಳ ಕೇಳದೆ ಅನ್ಯ ಪುರಾಣಗಳ ಕೇಳಿ
ಕೆಟ್ಟೆನಯ್ಯ ಕೂಡಲ ಸಂಗಮದೇವ.

—ಬಸವಣ್ಣ

# ಈ ಸಂಚಿಕೆಯಲ್ಲಿ



## ಚಂದಾದಾರರಲ್ಲಿ ವಿನಂತಿ

1981 ನೆಯ ವರ್ಷದ ಚಂದಾ ನಂಬರ್ ಗುರುತಿಸಿಕೊಳ್ಳಿ. ವಿಳಾಸ ಬದಲಾವಣೆ ಮುಂತಾದ ವಿಚಾರಗಳಲ್ಲಿ ನಮ್ಮೊಡನೆ ವ್ಯವಹರಿಸುವಾಗ, ತಮ್ಮ ಚಂದಾ ನಂಬರ್ ಮತ್ತು ನಮ್ಮ ಪ್ರತಿನಿಧಿಗಳ ಹೆಸರನ್ನು ಬರೆಯುವುದನ್ನು ಮರೆಯಬೇಡಿ. ಚಂದಾ ಬಾಕಿಇರುವವರು ಸಂದಾಯಮಾಡಿ, ಸದಸ್ಯತ್ವವನ್ನು ಮುಂದುವರಿಸಿಕೊಂಡು 'ಸಿದ್ಧಗಂಗಾ' ಮುನ್ನಡೆಗೆ ಸಹಕರಿಸಿರಿ. ಸಿದ್ಧಗಂಗಾ ತರಿಸಿಕೊಳ್ಳುವಂತೆ ತಮ್ಮ ಬಂಧು ಮಿತ್ರರು ಮತ್ತು ಹಿತೈಷಿಗಳನ್ನು ಪ್ರೋತ್ಸಾಹಿಸಿ.



# ಶ್ರೀವಾಣಿ

ಸಾಮಾನ್ಯರ ದೃಷ್ಟಿಯಲ್ಲಿ ಮಾನವನ ವಯೋಮಾನವನ್ನು ಹುಟ್ಟಿದಾರಭ್ಯ ಸಾಯುವತನಕ ಲೆಕ್ಕ ಹಾಕುವುದು ವಾಡಿಕೆಯಾಗಿದೆ. ಆದರೆ ಜ್ಞಾನಿಗಳ ಗಣಿತದ ರೀತಿಯೇ ಬೇರೆ. ಅವರ ದೃಷ್ಟಿಯಲ್ಲಿ ನಿದ್ರೆ, ಕಲಹ, ವ್ಯಸನಗಳಲ್ಲಿ ವ್ಯರ್ಥವಾಗಿ ಕಳೆದ ವಯಸ್ಸು ಪರಿಗಣಿತವಲ್ಲ.

ಒಬ್ಬ ಮಹಾರಾಜ ಭಟರೊಂದಿಗೆ ಬರುತ್ತಿದ್ದ; ಮಾರ್ಗಮಧ್ಯೆ ಕರ್ತವ್ಯನಿರತನಾಗಿದ್ದ ಮುದುಕನೊಬ್ಬನನ್ನು ನೋಡಿದ, ಬಳಿಬಂದು ಪ್ರಶ್ನಿಸಿದ; ಮುದುಕ ! ನಿನಗೀಗ ವಯಸ್ಸೆಷ್ಟು ? ಆಗ ಮುದುಕ ಗಂಭೀರವಾಗಿ ಉತ್ತರ ಕೊಟ್ಟ. ಪ್ರಭೂ ನನಗೀಗ ನಾಲ್ಕೇ ವರ್ಷ ವಯಸ್ಸು. ರಾಜ ಈ ಉತ್ತರ ಕೇಳಿ ಅವಾಕ್ಕಾದ. ನಂತರ ಮರುಪ್ರಶ್ನಿಸಿದ– ಹೇ ಮುದಕ ನಿನ್ನ ಅಂಗಾಂಗಗಳೆಲ್ಲಾ ಶಕ್ತಿಗುಂದಿ ಶಿಥಿಲವಾಗಿರುವುದನ್ನು ನೋಡಿದರೆ ನಿನಗೆ ಏನಿಲ್ಲಾಂದರೂ 70–80 ವರ್ಷಗಳಾಗಿರುವಂತೆ ಕಾಣುತ್ತಿದೆ. ಅಂತಹುದರಲ್ಲಿ ನಾಲ್ಕೇ ವರ್ಷ ಅಂತ ಹೇಳುತ್ತಿಯಲ್ಲಾ ? ಆಗ ಮುದುಕ–ಸ್ವಾಮಿ; ನಾನು ಹೇಳುತ್ತಿರುವುದು ಸತ್ಯ; ನನಗಾಗಿರುವುದು ನಾಲ್ಕೇ ವರ್ಷ ವಯಸ್ಸು. ಹೇಗೆಂದರೆ, ನನ್ನ ಆಯುಷ್ಯದಲ್ಲಿ ಹತ್ತಾರು ವರ್ಷಗಳು ನಿದ್ರೆಯಲ್ಲಿ ಹಲವಾರು ವರ್ಷಗಳು ಕಲಹದಲ್ಲಿ, ಮತ್ತೆ ಹಲವು ವರ್ಷಗಳು ದುರ್ವ್ಯಸನಗಳಲ್ಲಿ ವ್ಯರ್ಥವಾಗಿ ಕಳೆದು ಹೋದವು. ನಾನು ಮನುಷ್ಯ, ಮನುಷ್ಯನಾಗಿ ಬಾಳ್ವಿಕೆಯ ಅರಿವು ಮೂಡಿದ್ದು ಇಲ್ಲಿಗೆ ನಾಲ್ಕು ವರ್ಷಗಳಾಗಿವೆ. ಅಂದಿನಿಂದ ಉದಾತ್ತ ಚಿಂತನೆಯಲ್ಲಿದ್ದೇನೆ. ಹೀಗಾಗಿ ನನ್ನ ಬದುಕಿನಲ್ಲಿ ಸಾರ್ಥಕವಾದದ್ದು ಈ ನಾಲ್ಕೇ ವರ್ಷ ವಯಸ್ಸು ಮಾತ್ರ. ಆದ್ದರಿಂದ ನನಗೆ "ನಾಲ್ಕೇ ವರ್ಷ ವಯಸ್ಸು" ಎಂದ. ಆ ಕಾರಣ ಬದುಕಿನಲ್ಲಿ ಸಾರ್ಥಕವಾದುದೇ ನಿಜವಾದ ವಯಸ್ಸು.

"ಸಿದ್ಧಗಂಗಾ" ಮಾಸ ಪತ್ರಿಕೆ

ಪ್ರಕಾಶಕರು

ಹೆಚ್. ಬಿ. ಗಂಗಾಧರಯ್ಯ

ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ





ಮುದ್ರಕರು

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟಣೆಯ ಸ್ಥಳ

ಶ್ರೀ ಸಿದ್ಧಗಂಗಾ ಕ್ಷೇತ್ರ

**ಚಂದಾ ವಿವರ**

ಆಜೀವ ಸದಸ್ಯತ್ವ 151-00 ರೂ

ವಾರ್ಷಿಕ ಚಂದಾ 15-00 ರೂ

ಪ್ರಕಾಶಕರು

'ಸಿದ್ಧಗಂಗಾ' ಮಾಸಪತ್ರಿಕೆ

ಶ್ರೀ ಸಿದ್ಧಗಂಗಾ ಮಠ—572104

ತುಮಕೂರು ಜಿಲ್ಲೆ.


### ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ನಾಡಿನ ಜನತೆಗೆ ಜ್ಞಾನ ದಾಸೋಹ ವಿತರಣೆಯ ಕೆಲಸದಲ್ಲಿ ತೊಡಗಿರುವ ಪ್ರಸಿದ್ಧ ಮಾಸಪತ್ರಿಕೆಯಾಗಿದೆ. ಈ ಉದ್ದೇಶ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಕಥೆ, ಕವನ, ಕಲೆ, ವಿಜ್ಞಾನ, ಶಿಕ್ಷಣ, ರಾಜನೀತಿ, ಧರ್ಮ, ದರ್ಶನ, ಇತಿಹಾಸ, ವೈಚಾರಿಕ, ಚಿಂತನ, ನಗೆಬರೆಹ, ಹರಟೆ ಮುಂತಾದ ಲೇಖನಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ ಕಾಗದದ ಒಂದೇ ಮಗ್ಗುಲಲ್ಲಿ ಸ್ಪಷ್ಟವಾಗಿ ಬರೆದಿರಬೇಕು. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಚೀಟಿಯನ್ನು ಲಗತ್ತಿಸಿರಬೇಕು. ಲೇಖನಗಳು ಅಕಸ್ಮಾತ್ ಕಳೆದು ಹೋದರೆ ಸಂಪಾದಕರು ಹೊಣೆಗಾರರಲ್ಲ. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಈ ಬಗ್ಗೆ ಪತ್ರವ್ಯವಹಾರಕ್ಕೆ ಅವಕಾಶವಿಲ್ಲ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನದ ಪ್ರಕಟಣೆಗೆ 'ಸಿದ್ಧಗಂಗಾ' ಆಗಿಂದಾಗ್ಗೆ ನಿಗದಿ ಪಡಿಸಿರುವ ಸಂಭಾವನೆಯನ್ನು ಕಳುಹಿಸಿಕೊಡಲಾಗುವುದು. ಸ್ಥಿರ ಶೀರ್ಷಿಕೆ ಪಡೆಯಲಿಚ್ಛಿಸುವ ಬರೆಹಗಾರರಿಗೆ ಆದ್ಯತೆ ಕೊಡಲಾಗುವುದು.

"ಸಂಪಾದಕರು"

'ಸಿದ್ಧಗಂಗಾ' ಕನ್ನಡ ಮಾಸ ಪತ್ರಿಕೆ

ಶ್ರೀ ಸಿದ್ಧಗಂಗಾ ಕ್ಷೇತ್ರ-572104

ತುಮಕೂರು ಜಿಲ್ಲೆ.

ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.



# ಸಂಪಾದಕೀಯ

ಐವತ್ತನಾಲ್ಕನೆಯ ಸಾಹಿತ್ಯ ಸಮ್ಮೇಳನ ಪ್ರಕೃತಿಯ ಪ್ರಶಾಂತ ಸುಂದರ ತಾಣವಾದ ಮಡಕೇರಿಯಲ್ಲಿ ನಡೆಯಿತು. ಬನಸಿರಿಯ ಬಯಲಿನ ಆಯ್ಕೆ ಔಚಿತ್ಯಪೂರ್ಣವಾದುದು. ಸಂಶೋಧಕರಾದ ಡಾ॥ ಶಂ. ಬಾ. ಜೋಶಿಯವರು ಸಮ್ಮೇಳನದ ಅಧ್ಯಕ್ಷರು. ಜೋಶಿಯವರ ದೀರ್ಘ ಭಾಷಣ ನಿಜಕ್ಕೂ ವಿಚಾರಾರ್ಹ. ಸಂಶೋಧನಾಪೂರ್ಣ ವಿಚಾರ ಅಡಗಿದೆ. ಭಾಷಣದ ಒಟ್ಟಾರೆ ಅಭಿಪ್ರಾಯ ಸಭೆ ಸಮ್ಮೇಳನಗಳೇ ಕೃತಿಗಿಂತ ಅಧಿಕವಾಗಿವೆ. ಪ್ರಚಾರದ ದೊಂಬಿಯಲ್ಲಿ ಕೃತಿಯ ಕೂಸು ನುಸುಳಿ ಬದುಕಲು ಪ್ರಯತ್ನಿಸುತ್ತಿದೆ. ಕನ್ನಡಿಗರು ಅಭಿಮಾನದಿಂದ ತಲೆಯೆತ್ತುತ್ತಿಲ್ಲ, ಪಕ್ಕದವರನ್ನು ನೋಡಿ ಅನುಕರಿಸಲು ಹವಣಿಸುತ್ತಿದ್ದೇವೆ. ಐವತ್ತನಾಲ್ಕು ಸಮ್ಮೇಳನಗಳು ಮುಗಿದರೂ ರಾಜಧಾನಿಯಲ್ಲಿ ಕನ್ನಡ ಮಾತನಾಡುವವರ ಸಂಖ್ಯೆ ಶೇ. 50ಕ್ಕೆ ಕೆಳಗಿಳಿಯುತ್ತಿರುವುದನ್ನು ಎಚ್ಚರಿಸಿದ್ದಾರೆ. ಇಂಗ್ಲೀಷಿನ ಪ್ರಾಬಲ್ಯ ಮತ್ತು ಮೋಹವನ್ನು ಖಂಡಿಸಿದ್ದಾರೆ. ಕನ್ನಡ ಆಡಳಿತ ಭಾಷೆ ಆಗಿಲ್ಲ, ಘೋಷಣೆಗೆ ಮಿತಿಯಿಲ್ಲ. ನಾಡಿನ ಎಲ್ಲ ಹಂತಗಳಲ್ಲೂ ಕನ್ನಡವೇ ಸಾರ್ವಭೌಮತ್ವ ಪಡೆಯದ ಹೊರತು, ಸಮ್ಮೇಳನ ಮತ್ತು ವಿಶ್ವ ಸಮ್ಮೇಳನಗಳ ಆಚರಣೆ ಕೇವಲ ಅಧಿಕಾರದಲ್ಲಿರುವವರ ಡಂಗುರ ಬಾರಿಸುವ ಸಂದರ್ಭವಲ್ಲದೆ ಪ್ರಯೋಜನಕಾರಿಯಲ್ಲ ಎಂಬ ಶ್ರೀ ಜೋಶಿಯವರ ಮಾತು ಅನ್ವರ್ಥ ಪೂರ್ಣ. ಸಾಹಿತ್ಯ ಪರಿಷತ್ತು ಕನ್ನಡದ ಸಾಂಸ್ಕೃತಿಕ ಬದುಕಿಗೆ ಮಹತ್ವ ನೀಡಿದ ಸಂಸ್ಥೆ, ಆ ಮೂಲ ಆಶಯಕ್ಕೆ ಭಂಗತರುವ ಇಂದಿನ ಗುಂಪುಗಾರಿಕೆಯನ್ನು ಕುರಿತು ಪ್ರಸ್ತಾಪ ಮಾಡಿದ್ದಾರೆ. ಆ ಗುಂಪುಗಾರಿಕೆ ನಿಜಕ್ಕೂ ಹಾಸ್ಯಾಸ್ಪದ. ಕನ್ನಡಿಗ ಕೇವಲ ನರನಾಗಿದ್ದರೆ ಸಾಲದು ಮಾನವನಾಗಬೇಕು ಎಂಬುದನ್ನು ಮನದಟ್ಟು ಮಾಡಿಕೊಳ್ಳಬೇಕು. ಸಮ್ಮೇಳನವು ಸಂಭ್ರಮದಿಂದ ನಡೆಯಿತು. ಅಲ್ಲಿನ ತಳಿರು ತೋರಣ, ಬಣ್ಣಬಣ್ಣದ ರಂಗಿನ ಶೃಂಗಾರ ಹಿಂದಿನ 53 ಸಮ್ಮೇಳನಗಳ ವ್ಯವಸ್ಥೆಯನ್ನು ನಾಚಿಸುವಂತಿದ್ದವು. ಆದರೆ ಹೊಟ್ಟೆಗಿಲ್ಲದಿದ್ದರೂ ಜುಟ್ಟಿಗೆ ಮಲ್ಲಿಗೆ ಹೂ ಎನ್ನುವ ಆಕ್ಷೇಪ ನಿಜಕ್ಕೂ ಅಕ್ಷಮ್ಯ. ಮುಂದಿನ ಸಮ್ಮೇಳನಗಳು ಈ ಆಕ್ಷೇಪಗಳಿಂದ ಮುಕ್ತವಾಗಲಿ ಎಂದು ಆಶಿಸೋಣ.

# ನ ವ ನೀ ತ

**ಕಿಂ ಕುಲೇನೋಪದಿಷ್ಟೇನ ಶೀಲಮೇವಾತ್ರ ಕಾರಣಂ ।**
**ಭವಂತಿ ಸುತರಾಂ ಸ್ಫೀತಾಃ ಸುಕ್ಷೇತ್ರೇ ಕಂಟಕಿ ದ್ರುಮಾಃ ॥**

—ಮೃಚ್ಛಕಟಿಕ

ಕುಲವನ್ನು ಹೇಳುವುದರಿಂದ ಪ್ರಯೋಜನವಿಲ್ಲ. ನಡತೆಯೇ ಮುಖ್ಯ. ಒಳ್ಳೆಯ ಫಲವತ್ತಾದ ನೆಲದಲ್ಲಿ ಮುಳ್ಳಿನ ಗಿಡಗಳು ಚೆನ್ನಾಗಿ ಬೆಳೆಯುವುದಿಲ್ಲವೆ ?

❁ ❁ ❁

**ಷಡ್ದೋಷಾಃ ಪುರುಷೇಣೇಹ ಹಾತವ್ಯಾ ಭೂತಿಮಿಚ್ಛತಾ ।**
**ನಿದ್ರಾ ತಂದ್ರಾ ಭಯಂ ಕ್ರೋಧಃ ಆಲಸ್ಯಂ ದೀರ್ಘ ಸೂತ್ರತಾ ॥**

—ಹಿತೋಪದೇಶ

ಅಭಿವೃದ್ಧಿಯನ್ನು ಬಯಸುವ ಪುರುಷನು ನಿದ್ರೆ, ತೂಕಡಿಕೆ, ಹೆದರಿಕೆ, ಕ್ರೋಧ, ಸೋಮಾರಿತನ, ಪಾಲುಮಾರಿಕೆ ಈ ಆರು ದೋಷಗಳನ್ನು ಬಿಡಬೇಕು.

❁ ❁ ❁

**ಜೀಯತಾಂ ದುರ್ಜಯಾ ದೇಹೇ ರಿಪವಶ್ಚಕ್ಷುರಾದಯಃ ।**
**ಜಿತೇಷು ನನು ಲೋಕೋಽಯಂ ತೇಷು ಕೃತ್ಸ್ನಸ್ತ್ವಯಾ ಜಿತಃ ॥**

—ಕಿರಾತಾರ್ಜುನೀಯ

ಶರೀರದಲ್ಲಿರುವ ಶತ್ರುಗಳಾದ ಕಣ್ಣು ಮೊದಲಾದ ಇಂದ್ರಿಯಗಳನ್ನು ಗೆಲ್ಲಬೇಕು. ಇಂದ್ರಿಯಗಳನ್ನು ಗೆದ್ದವನು ಲೋಕವನ್ನೇ ಗೆದ್ದಹಾಗೆ.



**ಗಾದೆ-ಸವಕಳಿ, ವಿರೂಪ:**

# ಚಿಂತನ

—ಟಿ. ಆರ್. ಮಹಾದೇವಯ್ಯ

ಗಾದೆ ಜಾನಪದ ಅನುಭವದ ಕೆನೆ. ಅದು ಜೀವನಾನುಭವವನ್ನು ಮಥಿಸಿದಾಗ ಮೂಡಿದ ನವನೀತ. ಅವು ನಮ್ಮ ದೈನಂದಿನ ಜೀವನ ಭಂಡಾರದಿಂದ ತೆಗೆದ ಅಮೂಲ್ಯ ರತ್ನಗಳು. ಅಜ್ಞಾತ ಅನುಭವಿಗಳು ಬರೆದ ಏಕ ಪಂಕ್ತಿಯ ಕಾವ್ಯವೆನಿಸುವ ನಾಣ್ಣುಡಿಗಳು ವಿಶ್ವವಿಶಾಲವಾದ ಅನುಭವಗಳನ್ನು, ಅಪೂರ್ವವಾದ ವಿಚಾರಧಾರೆಯನ್ನು ತಮ್ಮಲ್ಲಿ ಹುದುಗಿಸಿಕೊಂಡಿರುತ್ತವೆ. ಜನಮನದಿಂದ ಮೂಡಿ ಜನಮನವನ್ನೇ ತಿದ್ದಲೆಳಸುವ ಗಾದೆಗಳು ಸಂಸ್ಕೃತಿಯ ಸುಳಿವ ಶಾಸನಗಳು. ಗಾದೆಗಳ ಮೂಲ ನಿನ್ನೆ ಮೊನ್ನೆಯದಲ್ಲ. ಭಾಷೆಯೊಡನೆಯೇ ಅವು ಬೆಳೆದುಬಂದಿದೆ. ಹೀಗಾಗಿ ಅವಕ್ಕೆ ಸಾವಿರಾರು ವರ್ಷದ ಪರಂಪರೆಯಿದೆ. ಅಪಾರ ಅನುಭವವನ್ನು, ಸುಜ್ಞಾನವನ್ನು ಗರ್ಭೀಕರಿಸಿಕೊಂಡು ಈ ಜ್ಞಾನದ ಕಿಡಿಗಳು ಬಾಳಿಗೆ ಬೆಳಕನ್ನು ನೀಡಿ ಮಾರ್ಗದರ್ಶನ ನೀಡುತ್ತವೆ. ಸಾವಿರಾರು ಗಾದೆಗಳು ಗ್ರಂಥಸ್ಥವಾಗದೆ ಜನರ ವ್ಯಾವಹಾರಿಕ ಭಾಷೆಯಲ್ಲೇ ಉಳಿದಿವೆ. ಜನರ ಬಳಕೆ ಮಾತಿನಿಂದ ಪ್ರಭಾವಿತರಾದ ಕವಿಗಳು ಆ ಭಾಷೆಯ ಸೊಗಡನ್ನು ತಮ್ಮ ಕಾವ್ಯಗಳಲ್ಲಿ ಬಳಸಿರುವುದುಂಟು. ಹೀಗೆ ಕೆಲವು ಗಾದೆ ಮಾತುಗಳೂ ಗ್ರಂಥಸ್ಥವಾಗಿವೆ. ಇದರಿಂದ ಆಗಿರುವ ದೊಡ್ಡ ಉಪಕಾರವೆಂದರೆ ಗಾದೆಗಳ ನಿರ್ದಿಷ್ಟವಾದ ಮೂಲರೂಪ ಅಲ್ಲಿ ದೊರೆಯುವ ಸಾಧ್ಯತೆಯುಂಟಾಯಿತು. ಗ್ರಂಥಸ್ಥವಾಗದೆ ಕೇವಲ ಆಡುಮಾತಿನಲ್ಲೇ ಬಳಕೆಯಾಗಿರುವ ಗಾದೆಗಳು ಅನೇಕಸಲ ಸವಕಳಿಯಾಗಿವೆ. ಮನುಷ್ಯ ಅವನ್ನು ಉಚ್ಚರಿಸುವಾಗ ಮಾಡುವ ವ್ಯತ್ಯಾಸದಿಂದ, ಅದನ್ನು ಬಳಸುವವರ ಮೌಢ್ಯದಿಂದ ಗಾದೆಯ ಮೂಲಸ್ವರೂಪ ಪಲ್ಲಟವಾಗಿ ಅರ್ಥವೇ ಆಗದಂತಹ ರೂಪ ಬಂದುಬಿಟ್ಟಿರುವ ನಿದರ್ಶನಗಳು ಉಂಟು. ಹೀಗಾಗಿ ಈ ಹೊತ್ತು ಅನೇಕ ಗಾದೆಗಳಿಗೆ ಅರ್ಥಹೇಳುವುದೇ ಕಷ್ಟವಾಗಿದೆ. 1) ನಂಬಿಗೆ ಇದ್ದರೆ ತಂಬಿಗೆ ಬೇಕಿಲ್ಲ-ಎಂಬುದೊಂದು ಗಾದೆ. ಇದು ನಂ ಬಿಗಿ ಇದ್ದರೆ ತಂ ಬಿಗಿ ಬೇಕಿಲ್ಲ ಎಂಬುದರ ಅಶುದ್ಧರೂಪ. ನಮ್ಮಲ್ಲಿ ಬಿಗಿ, ಶಿಸ್ತು ಇದ್ದಮೇಲೆ ತಮ್ಮ, ಅಂದರೆ ಇನ್ನೊಬ್ಬರ ಬಿಗಿ, ಕಟ್ಟುಕಟ್ಟಳೆ ಬೇಕಿಲ್ಲ ಎಂದು ಅರ್ಥ ಸ್ಪಷ್ಟವಾಗುತ್ತದೆ. 2) ಇನ್ನೊಂದು ಬೆಕ್ಕಿಗೆ ಜ್ವರಬಂದಂತೆ. ಬೆಕ್ಕಿಗೆ ಜ್ವರವೇ ಬರುವುದಿಲ್ಲವೆ? ಏನಿದರ ವೈಶಿಷ್ಟ್ಯ? ಈ ಗಾದೆ ಬಳಕೆಯಾಗುವ ಸಂದರ್ಭಗಳನ್ನು ನೋಡಿದರೆ ಆಗಬಾರದ್ದು ಆದಂತೆ ಎಂಬ ಅರ್ಥ ಗೋಚರಿಸುತ್ತದೆ. ಇದೂ ವಿರೂಪಗೊಂಡಿದೆ ಎನಿಸುತ್ತದೆ. ಇದು ಬಹುಶಃ "ಬೆಂಕಿಗೆ ಜ್ವರಬಂದಂತೆ" ಎಂದಿರಬೇಕು. ಹರಿಹರಕವಿ ತನ್ನ ರುದ್ರಪಶುಪತಿ ರಗಳೆಯಲ್ಲಿ 'ಜ್ವಲನಂ ಜ್ವರಗೊಂಡನೆಂದು ಮಂತ್ರಿಸುತೆ, ಜಲಕೆ ಶೀತಂ ಬಂದುದೆಂದು ಭಾವಿಸುವಂತೆ'. 'ತೊಡಗಿದಂ ಜಪಿಸಲು ಪಂಚಾಕ್ಷರಿಯನಲ್ಲಿ' ಎಂದು ವರ್ಣಿಸಿರುವಲ್ಲಿ ಈ ಸುಳಿವು ಕಾಣಿಸುತ್ತದೆ, ಸಮರ್ಥನೆ ದೊರೆಯುತ್ತದೆ. 3) ಇನ್ನೊಂದು ಗಾದೆ: ನವಿಲಾಡಿತ್ತೆಂದು ಕೆಂಬೂತ ಪುಕ್ಕ ತರಿದು

(3ನೇ ರಕ್ಷಾ ಪುಟ ನೋಡಿ)

# ಕ್ಷೇತ್ರ ವಾರ್ತೆ

—ಪಿ. ಎಸ್. ಚಂದ್ರಶೇಖರಯ್ಯ

ದಿನಾಂಕ 6-12-81ರ ಭಾನುವಾರ 10 ಘಂಟೆಗೆ ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿ ಸಂಘದ ಕಾರ್ಯಾಲಯದಲ್ಲಿ, ಸಂಘದ ಪ್ರಧಾನ ಕಾರ್ಯದರ್ಶಿಗಳಾದ ಶ್ರೀ ಡಾ॥ ಎಂ. ಎನ್. ಚನ್ನಬಸಪ್ಪನವರ ಅಧ್ಯಕ್ಷತೆಯಲ್ಲಿ, ವಸ್ತುಪ್ರದರ್ಶನ ಮತ್ತು ಹಳೆಯ ವಿದ್ಯಾರ್ಥಿ ಸಂಘದ ಕಾರ್ಯಕಾರಿ ಸಮಿತಿಗಳ ಸದಸ್ಯರು ಸಭೆ ಸೇರಿ ಪ್ರಮುಖ ಅಂಶಗಳನ್ನು ಚರ್ಚಿಸಿದರು. 1) 82 ರ ಫೆಬ್ರವರಿ 12 ರಿಂದ ಪ್ರಾರಂಭವಾಗುವ ಜಾತ್ರಾ ಸಂದರ್ಭದ ವಸ್ತುಪ್ರದರ್ಶನದ ವಿವಿಧ ಸಮಿತಿಗಳನ್ನು ರಚಿಸಲಾಯಿತು. ವಸ್ತುಪ್ರದರ್ಶನದ ಕಾರ್ಯದರ್ಶಿಗಳಾದ ಶ್ರೀ ಪಿ. ಎಸ್. ಪುಟ್ಟಶಂಕರಯ್ಯನವರು ಹಿಂದಿದ್ದ ಸಮಿತಿಗಳ ಸದಸ್ಯರಿಗೆ ಕೃತಜ್ಞತೆಗಳನ್ನು ತಿಳಿಸಿದರು. ಶ್ರೀ ಬಿ. ಗಂಗಾಧರಯ್ಯ ನವರು ಪುನರ್ವಿಮರ್ಶಿತ ಸಮಿತಿಗಳ ಪಟ್ಟಿಯನ್ನು ಓದಿದರು. 2) ಸಂಘದ ಕಾರ್ಯ ದರ್ಶಿಗಳಾದ ಶ್ರೀ ಕೆ. ಹೆಚ್. ಶಿವರುದ್ರಯ್ಯನವರು ಶ್ರೀ ಶ್ರೀಗಳವರ ಸುವರ್ಣ ಮಹೋತ್ಸವದ ನಿಧಿಗಾಗಿ ವಸೂಲಾಗಿರುವ ನಿಧಿಯ ವಿವರದ ಅಂಕಿ ಅಂಶಗಳ ಪಟ್ಟಿ ಯನ್ನು ಸಭೆಯ ಮುಂದಿಟ್ಟರು. 3) ಸುವರ್ಣ ಮಹೋತ್ಸವವನ್ನು 82 ರ ಏಪ್ರಿಲ್ ಕೊನೆಯ ವಾರದಲ್ಲಿ ನಡೆಸಲು ಸುಸಂದರ್ಭವೆಂದು ತೀರ್ಮಾನಿಸಿ, ಸಮಾರಂಭಗಳು ನಡೆಯುವ ವಿಧಿ ವಿಧಾನ ಮತ್ತು ದಿನಾಂಕಗಳ ನಿಗದಿ ಇತ್ಯಾದಿ ವಿವರಗಳ ಬಗ್ಗೆ ಶ್ರೀ ಶ್ರೀಗಳವರನ್ನು ಪ್ರಾರ್ಥಿಸಿಕೊಳ್ಳುವುದೆಂದು ಸಭೆಯು ಅನುಮತಿ ನೀಡಿತು. 4) ಸುವರ್ಣ ಮಹೋತ್ಸವದ ಸಮಾರಂಭ ಇತ್ಯಾದಿ ವಿಶೇಷ ಮಹತ್ವ ವಿಚಾರ ಗಳನ್ನು ಕುರಿತು ಚರ್ಚಿಸುವ ಸಲುವಾಗಿ ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿ **ಸಂಘದ ಸರ್ವಸದಸ್ಯರ ಸಭೆಯನ್ನು ಕರೆಯಲು ದಿನಾಂಕ 10-1-1982** ರ ಭಾನುವಾರ 10-30ಕ್ಕೆಂದು ಸಭೆಯು ಗೊತ್ತುಪಡಿಸಿತು. 5) ಸುವರ್ಣ ಮಹೋತ್ಸವ ಸಂದರ್ಭದಲ್ಲಿ ಶ್ರೀ ಕ್ಷೇತ್ರದ ಹಳೆಯ ವಿದ್ಯಾರ್ಥಿಗಳು ಅರ್ಪಿಸಲಿರುವ 'ಸಿದ್ಧಗಂಗಾಶ್ರೀ' ಸಂಭಾವನಾ ಗ್ರಂಥವನ್ನು ಮುಂಗಡವಾಗಿ ಪಡೆಯಲಿಚ್ಛಿಸುವವರಿಗೆ 82 ರ ಜನವರಿ 31 ನ್ನು ಕೊನೆಯ ದಿನಾಂಕವೆಂದು ಸಭೆಯು ನಿಗಧಿಪಡಿಸಿತು. (ಹಳೆಯ ವಿದ್ಯಾರ್ಥಿ ಗಳಿಗೆ 75 ರೂಪಾಯಿಗಳು ಹಿತೈಷಿಗಳಿಗೆ 101 ರೂಪಾಯಿಗಳು). ಕಾರ್ಯಕಾರಿ ಸಮಿತಿಗಳ ಸಭೆಯು ಯಶಸ್ವಿಯಾಗಿ ನಡೆದದ್ದಕ್ಕೆ ಸಭೆಯ ಅಧ್ಯಕ್ಷರು ಆತ್ಮೀಯ ಅಭಿವಂದನೆಗಳನ್ನು ತಿಳಿಸಿದರು. ಕಾರ್ಯದರ್ಶಿಗಳು ಸಭೆಗೆ ವಂದಿಸಿದರು.

ಮುಂಬರಲಿರುವ ಚಿನ್ನದ ಹಬ್ಬ ಎಲ್ಲ ಭಕ್ತಾದಿಗಳ, ಹಿತೈಷಿಗಳ ಮತ್ತು ಅಪಾರ ವಿದ್ಯಾರ್ಥಿ ಬಳಗಗಳ ಮಹತ್ವಪೂರ್ಣ ಸಮಾರಂಭ. ಈ ಮಹತ್ವಪೂರ್ಣ ಸಮಾರಂಭದಲ್ಲಿ ತನು-ಮನ-ಧನಗಳನ್ನರ್ಪಿಸಿ ಕೃತಕೃತ್ಯರಾಗುವ ಸೌಭಾಗ್ಯವನ್ನು ರಿಗೂ ಕ್ಷೇತ್ರಾಧಿಪತಿ ಶ್ರೀ ಸಿದ್ಧಲಿಂಗೇಶ್ವರರು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇವೆ.







# ಉದ್ದಾನ ಶಿವಯೋಗಿಗಳವರ ಅದ್ಭುತ ಘಟನೆಗಳು

— ಸಂ॥ ಚನ್ನಪ್ಪ ಎರೇಸೀಮೆ

೭

ಕಲ್ಲೆಯ[37] ಸೋಮಣ್ಣ ಕೃಷಿ ಕಾಯಕದಲ್ಲಿ ಅತ್ಯಂತ ಶ್ರದ್ಧಾಭಕ್ತಿ ತಳೆದ ಓರ್ವ ವ್ಯಕ್ತಿ. ಸದೃಢ ಶರೀರಿ, ಈತನಿಗೆ ಸಂತಾನ ಭಾಗ್ಯವೇ ಮೂವರು ಪತ್ನಿಯ ರಿಂದ ಲಭಿಸಲಿಲ್ಲ. ಅವರೆಲ್ಲ ಸತ್ತರು. ಇಷ್ಟಾದರೂ ಸಂತಾನ ವಿಷಯದಲ್ಲಿ ಅವನ ತೀವ್ರಾಸಕ್ತಿ ಮಾಯವಾಗಲಿಲ್ಲ. ಕಲ್ಲೆಯವನ್ನು ಬಿಟ್ಟು ಅಂಬಲಗೆರೆಗೆ[38] ಬಂದ ಅಲ್ಲೆ ಸ್ವಲ್ಪ ಭೂಮಿ ಕಾಣಿಕೆಯನ್ನು ಮಾಡಿಕೊಂಡು ಕೃಷಿ ಕಾಯಕದಲ್ಲಿ ನಿರತ ನಾದ. ನಾಲ್ಕನೆಯ ಮದುವೆಯನ್ನು ಮಾಡಿಕೊಂಡ. ಅವರಿಂದಲೂ ಮಕ್ಕಳಾಗ ಲಿಲ್ಲ. ಅತಿ ದುಃಖಿತನಾದ ಸೋಮಣ್ಣ ಒಂದು ಸಲ ಅಂಬಲಗೆರೆಗೆ ಬಂದ ಉದ್ದಾನ ಶಿವಯೋಗಿಗಳ ಬೆನ್ನು ಬಿದ್ದು ಅವರ ದರ್ಶನ ಪಡೆದು ತನ್ನ ದುಃಖವನ್ನು ಹೇಳಿ ಕೊಂಡ. 'ಸ್ವಾಮಿಯವರು ಆಶೀರ್ವದಿಸಿ ನನ್ನ ವಂಶದ ಕುಡಿ ಮುಂದುವರಿಯುವಂತೆ ಮಾಡಬೇಕೆಂದು' ಬೇಡಿಕೊಂಡ. ಆತನ ಕೊರಗನ್ನು ಅರ್ಥಮಾಡಿಕೊಂಡ ಶ್ರೀಗಳ ವರು 'ಮೊದಲು ಗಂಡುಮಗುವಾಗುತ್ತೆ. ಮಗು ಹುಟ್ಟಿದಮೇಲೆ ಅಮ್ಮನವರ ಹೆಸರಿಟ್ಟು ಅವನ ತೂಕ ರೂಪಾಯಿ ತಂದು ದಾಸೋಹಕ್ಕೆ ಅರ್ಪಿಸು. ಹೋಗು ಹೋಗು' ಎಂದರು. ಹರ್ಷಿತನಾದ ಸೋಮಣ್ಣ ಮನೆಗೆ ಬಂದ ಅಂದು ಅವನಿಗೆ ವಿಲಕ್ಷಣಾನಂದವಾಯಿತು. ವರ್ಷ ತುಂಬುವುದರೊಳಗೆ ಗಂಡು ಮಗುವು ಜನನ ವಾಯಿತು. ಇದು ನಡೆದದ್ದು 1930 ನೆಯ ಇಸ್ವಿ ಫೆಬ್ರವರಿ ತಿಂಗಳಲ್ಲಿ. ಮಗು ವಿಗೆ ಶ್ರೀಗಳವರ ಆದೇಶದಂತೆ ಸಿದ್ಧಗಂಗಪ್ಪ ಎಂದು ನಾಮಕರಣ ಮಾಡಿ, ನೂರು

---

37. 64 ಶೀಲಗಳನ್ನು 13 ನೇ ಶತಮಾನದಲ್ಲಿ ಆಚರಿಸುತ್ತಿದ್ದ ಸರ್ವಶೀಲೆ ಚೆನ್ನಮ್ಮ ನವರ ಊರು ಮಾಗಡಿ ತಾಲ್ಲೂಕಿನಲ್ಲಿದೆ. ಪಾಲ್ಕುರಿಕೆ ಸೋಮನಾಥರ ಸಮಾಧಿ ಸ್ಥಳವೂ ಇದೆ. ಇಲ್ಲಿ ಈಗಲೂ ಸೋಮಣ್ಣ ಎನ್ನುವ ಹೆಸರಿನವರು ಬಹಳ.

39. ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿರುವ ಒಂದು ಹಳ್ಳಿ. ಉದ್ದಾನಸ್ವಾಮಿಗಳವರ ಅತ್ಯಂತ ಪ್ರೀತಿಪಾತ್ರವಾದ ಒಂದು ಹಳ್ಳಿ. ಇಲ್ಲಿನವರ ಸೇವೆ ಮಠಕ್ಕೆ ಈಗಲೂ ಬೃಹತ್ ಪ್ರಮಾಣದಲ್ಲೆ ನಡೆಯುತ್ತಾ ಇದೆ.

ರೂಪಾಯಿಗಳನ್ನು ತೆಗೆದುಕೊಂಡು ಹೋಗಿ ಸ್ವಾಮಿಗಳಿಗೆ ಅರ್ಪಿಸಿದ. ಸ್ವಾಮಿಗಳು 'ಈ ನೂರು ರೂಪಾಯಿಗಳು ಮಗುವಿನ ತೂಕ ತೂಗುವುದಿಲ್ಲ. ಹೋಗು ಹೋಗು ತೆಂಗಿನಕಾಯಿ ತಂದು ತೂಗು' ಎಂದರು. ಅದರಂತೆ ಮಗುವಿನ ತೂಕಕ್ಕೆ ನೂರು ರೂಪಾಯಿ, ತೆಂಗಿನಕಾಯಿಗಳನ್ನೂ ತೂಗಿ ಅರ್ಪಿಸಿ ಬಂದನು. ಶ್ರೀಗಳವರು ಅಂಬಲಗೆರೆಗೆ ಬಂದು ಸೋಮಣ್ಣನ ಮನೆಯ ಮುಂಭಾಗದ ಚಪ್ಪರದಲ್ಲಿ ಕುಳಿತು ಕೊಂಡು ತಾವೇ ದುಡ್ಡು ಕೊಟ್ಟು ದಾಬಸ್‌ಪೇಟೆಯಿಂದ ಒಂದು ಚೀಲ ಪುರಿ, ಕಡಲೆ, ಕಲ್ಲುಸಕ್ಕರೆ, ಉತ್ತತ್ತಿಗಳನ್ನು ತರಿಸಿ ಊರಿಗೆಲ್ಲ ಹಂಚಿಸಿ ಮಗುವನ್ನು ಕೈ ಗೆತ್ತಿಕೊಂಡು ಮುದ್ದಾಡಿ ಬಂದರು. ಮಗು ಬೆಳೆದು ದೊಡ್ಡದಾದಾಗ ಒಮ್ಮೆ ಅಂಬಲಗೆರೆಗೆ ಬಂದಾಗ ಅದನ್ನು ಗುರುತಿಸಿ ಏಯ್, ಹೋಗು, ಹೋಗು, ನಿಮ್ಮಪ್ಪ ನಿನ್ನ ತೂಕದ ರೂಪಾಯಿ ಕೊಡುತ್ತೇನೆ ದಾಸೋಹಕ್ಕೆ ಎಂದಿದ್ದ, ತೆಗೆದುಕೊಂಡು ಬಾಹೋಗು. ಎಂದರಂತೆ. ಹುಡುಗ ತಂದೆಯನ್ನು ಬೇಡಿ ಹಣವನ್ನು ಪಡೆದು ಗುರುತಿಸಿದ್ದುಂಟು.

( ಅಂಬಲಗೆರೆಯ ಜನರ ಬಾಯಲ್ಲಿರುವ ಕಥೆ )

೭

ದೇವರಾಯಪಟ್ಟಣದಲ್ಲಿರುವ ಮಠದ ಹೊಲದಲ್ಲಿ ಮೆಣಸಿನ ಗಿಡ ಹಚ್ಚಿಸ ಲಾಗಿತ್ತು. ದೇವರಾಯ ಪಟ್ಟಣದಲ್ಲಿದ್ದ ಸಂಜೀವಯ್ಯ ಎಂಬುವನು ಅಭಿಚಾರ ವಿದ್ಯೆ ಯಲ್ಲಿ ಹೆಸರುವಾಸಿಯಾಗಿದ್ದ ಮನುಷ್ಯ. ಆತನು ತನ್ನ ಅಭಿಚಾರ ವಿಧಿಯಿಂದ ಗಿಡಗ ಳೆಲ್ಲ ಒಣಗಿಹೋಗುವಂತೆ ಮಾಡಿದನಂತೆ. ಅದಕ್ಕಾಗಿ ಅವನನ್ನು ಮಠಕ್ಕೆ ಕರೆಯಿಸಿ, ಅಯ್ಯ ಸಂಜೀವಯ್ಯ, ನಮ್ಮ ದಾಸೋಹಕ್ಕೆ ಬೇಕೆಂದು ಹೊಲದಲ್ಲಿ ಮೆಣಸಿನ ಗಿಡ ಹಚ್ಚಿದರೆ ಅವು ಒಣಗಿಹೋಗುವಂತೆ ಮಾಡಬಹುದೇ?' ಎಂದರು. ಅದಕ್ಕೆ ಆತನು 'ನಾನು ಮಾಡಿಲ್ಲ ಎಂದ'. ಅವನು ತನ್ನ ಅಭಿಚಾರ ಸಾಮಗ್ರಿ ಸಮೇತ ಅಲ್ಲಿಗೆ ಬಂದಿದ್ದ. ಆಗ ಉದ್ದಾನಪ್ಪನವರು 'ಎಲೋ, ನಿಜ ಹೇಳುವೆಯೋ ಬೇಕೋ ನಿನಗೆ' ಎಂದು ಕೈ ಬೆತ್ತವನ್ನು ಮೇಲಕ್ಕೆತ್ತಿದರು. ಆಗ ಅವನು 'ಸ್ವಾಮಿಗಳ ಕೈ ತನಗೆ ಬೀಳದಹಾಗೆ ಕೈ ಮೇಲಕ್ಕೆತ್ತಿರುವಂತೆಯೇ ಮಾಡಿಬಿಟ್ಟ. ಆಗ ಸ್ವಾಮಿಗಳು 'ಎಲೋ ದೃಷ್ಟ, ನನ್ನಮೇಲೆಯೇ ನಿನ್ನ ಶಕ್ತಿ ಪ್ರಯೋಗ ಮಾಡುವೆಯಾ ಎಂದು ಎಡಗೈ ಯಿಂದ ಒಂದು ನಿಂಬೆಹಣ್ಣನ್ನು ಅವನ ಮೇಲೆ ಹಾಕಿದರು. ಆ ಕೂಡಲೇ ಅವನು ನೆಲಕ್ಕೆ ಬಿದ್ದ. ಆಗ ಉದ್ದಾನಪ್ಪನವರು ಬೆತ್ತವನ್ನು ಹಿಡಿದು ನಡೆ, ನಡೆ, ಎನ್ನು ತ್ತಿದ್ದಂತೆಯೇ ಅವನು ಭೂಮಿಯ ಮೇಲೆ ಉರುಳುತ್ತಾ ನಡೆದನು. ಅಪ್ಪಾ ಉದ್ದಾನಪ್ಪನವರೇ ಇನ್ನು ಮೇಲೆ ಸಾಯೋತನಕ ನಿಮ್ಮ ತಂಟೆಗೆ ಬರುವುದಿಲ್ಲ. ನಾನು ಮಾಡಿದ್ದು ತಪ್ಪು ಸಾಕು ಸಾಕು' ಎಂದ. ಸ್ವಾಮಿಗಳು ಈ ಮೂರ್ಖ



ನಿಗೆ ಸರಿಯಾದ ಪಾಠ ಕಲಿಸಬೇಕೆಂದು, 'ಎಲೋ ಸಂಜೀವಯ್ಯ ನನ್ನ ಮೇಲೆ ಮಠದ ಮೇಲೆ ಮಾಡುವುದಿರಲಿ ಇನ್ನಾರ ಮೇಲೂ ಆ ಅಭಿಚಾರ ಪ್ರಯೋಗ ಮಾಡುವುದಿಲ್ಲವೆಂದು ಸಿದ್ಧಲಿಂಗೇಶ್ವರನ ಮೇಲೆ ಆಣೆ ಇಟ್ಟರೆ ನಿನ್ನನ್ನು ಕೈ ಬಿಡು ತ್ತೇನೆ. ಇಲ್ಲದಿದ್ದ ನಿನ್ನನ್ನು ಹಾಗಯೇ ಕ್ಯಾತ್ಸಂದ್ರದವರೆಗೆ ಉರುಳಿ ಹೋಗುವಂತೆ ಮಾಡುತ್ತೇನೆ' ಎಂದರು. ಸಂಜೀವಯ್ಯ ಮೇಲೇಳಲೇ ಆಗಲಿಲ್ಲ. ಉದ್ದಾನಪ್ಪನವರು 'ನಡೆ ನಡೆ.....' ಅಂದಂತೆ ಅವನು ಉರುಳುತ್ತಲೇ ಇದ್ದ. ಉರುಳಿ ಉರುಳಿ ಸುಸ್ತಾಗಿ ಹೋಗಿದ್ದ. ಇನ್ನು ಈ ಉದ್ದಾನಪ್ಪ ನನ್ನನ್ನು ಕೈ ಬಿಡುವುದಿಲ್ಲವೆಂಬುದನ್ನು ಅರಿತು ಕೊಂಡ ಆಗ ತನ್ನ ಬಗಲಲ್ಲಿದ್ದ, ತನ್ನೊಡನೇ ಇದ್ದ ಜೋಳಿಗೆಯನ್ನು ತೆಗೆದು ಇಟ್ಟು'. ಅಪ್ಪಾ, ಇನ್ನು ಮೇಲೆ ಈ ಜೋಳಿಗೆಯನ್ನು ಮುಟ್ಟುವುದಿಲ್ಲ. ಸಿದ್ಧ ಲಿಂಗೇಶ್ವರನ ಆಣೆಯಾಗಿ ಯಾರ ಮೇಲೂ ಅಭಿಚಾರ ಪ್ರಯೋಗ ಮಾಡುವುದಿಲ್ಲ' ಎಂದು ಭಾಷೆ ಕೊಟ್ಟ ಮೇಲೆ ಶ್ರೀಗಳವರು ಹೇಳು ಹಾಗಾದರೆ ಎಂದು ಎಬ್ಬಿಸಿ ಅವನಿಗೆ ಸ್ನಾನ ಮಾಡಿಸಿ ಊಟ ಮಾಡಿಸಿ ಕಳಿಸಿಕೊಟ್ಟರು. ಅಂದಿನಿಂದ ಅವನು ಅಭಿಚಾರ ಪ್ರಯೋಗವನ್ನು ಬಿಟ್ಟುಬಿಟ್ಟನು.

ಶ್ರೀ ಶಿವಯೋಗಿಗಳಿಗೆ ಇಂಥ ವಿದ್ಯೆಯ ಪರಿಚಯ ಚೆನ್ನಾಗಿ ಗೊತ್ತಿತ್ತು. ವಿದ್ಯೆಗಳನ್ನೆಲ್ಲಾ ಪೂರ್ವಾಶ್ರಮದಲ್ಲೆ ಕಲಿತಿದ್ದರು. ಮುಂದೆ ಅವುಗನ್ನೆಲ್ಲ ಅಡವೀ ಸ್ವಾಮಿಗಳ ಆಜ್ಞೆಯ ಮೇರೆಗೆ ಕೈ ಬಿಟ್ಟರು. ಆದರೆ ದುಷ್ಟರಿಗೆ ಬುದಿಕ್ಕಲಿಸುವ ಸಮಯ ಬಂದಾಗ ಈ ರೀತಿ ಪ್ರಯೋಗ ಮಾಡುತ್ತಿದ್ದರು.

( ದೇವರಾಯಪಟ್ಟಣದಲ್ಲಿನ ಜನಜನಿತ ಕಥೆ )

೮

ಒಮ್ಮೆ ದಾಬಸಪೇಟೆಯಲ್ಲಿ ವಾಸಿಸುತ್ತಿದ್ದ ಮಹಮದೀಯನೊಬ್ಬ ಸಿದ್ಧಗಂಗಾ ಮಠಕ್ಕೆ ಬಂದ. ಅವನು ಅಭಿಚಾರ ವಿದ್ಯೆಯಲ್ಲಿ ಮಹಾಸಮರ್ಥನೆಂದು ಹೆಸರು ವಾಸಿಯಾಗಿತ್ತು. ಆತನು ಅಟವೀಸ್ವಾಮಿಗಳ ಮೇಲೆ ತನ್ನ ಅಭಿಚಾರವಿದ್ಯೆಯನ್ನು ತೋರಿಸಲು ಬಂದಿದ್ದ. ಆಗ ಅಲ್ಲಿಯೇ ಇದ್ದ ರುದ್ರಪ್ಪನಿಗೆ ಈ ವಿಷಯ ಗೊತ್ತಾ ಯಿತು. ಅವನೂ ಅಡವೀಸ್ವಾಮಿಗಳ ಹತ್ತಿರವೇ ನಿಂತಿದ್ದ. ಆ ಸಾಬಿಯು ಅಡವಿ ಸ್ವಾಮಿಗಳವರ ಮೇಲೆ ಅಭಿಚಾರ ವಿದ್ಯೆಯನ್ನು ಪ್ರಯೋಗಿಸಿದ. ಇದು ಅಡವಿ ಸ್ವಾಮಿಗಳಿಗೆ ಗೊತ್ತಾಯಿತು. ಆಗ ರುದ್ರಪ್ಪ ಅವನಿಗೆ ಪ್ರತೀಕಾರ ಮಾಡಲೆಳಸಿ ಕೈಗೆ ನಿಂಬೆಹಣ್ಣನ್ನು ಹಿಡಿದ. ಅಡವಿಸ್ವಾಮಿಗಳು ರುದ್ರಪ್ಪನಕಡೆ ಹೊರಳಿ 'ರುದ್ರಪ್ಪ, ನನಗೆ ಗೊತ್ತಾಯಿತು ಈತನ ಅಭಿಚಾರ ವಿದ್ಯೆ ನನ್ನಮೇಲೆ ನಾಟು ವುದಿಲ್ಲ. ನೀನು ಇವನ ಮೇಲೆ ಪ್ರತೀಕಾರ ಮಾಡಬೇಡ. ಕ್ಷಮಿಸಿ ಮಠಬಿಟ್ಟು

ಕಳಿಸಿಬಿಡು' ಎಂದರು. ರುದ್ರಪ್ಪ ಆತನ ಕೈ ಹಿಡಿದು ಎಳೆದುಕೊಂಡು ಕ್ಯಾತ್ಸಂದ್ರದ ವರೆಗೆ ಹೋಗಿ, ಇನ್ನುಮೇಲೆ ಈ ಮಠದ ತಂಟೆಗೇನಾದರೂ ಬಂದರೆ ನಿನ್ನ ಗತಿ ಕಾಣಿಸಿಬಿಡುತ್ತೇನೆಂದು ಹೆದರಿಸಿ ಕಳುಹಿಸಿದರು. ಅಂದಿನಿಂದ ಮಠದ ಕಡೆಗೆ ಅವನು ಬರಲಿಲ್ಲ. ರುದ್ರಪ್ಪನ ಸಾಮರ್ಥ್ಯದ ಅರಿವೂ ಅವನಿಗೆ ಇತ್ತು.

( ಶ್ರೀ ಮಠದ ವೃದ್ಧ ಜನಜನಿತ ಕಥೆ )

ಈ ಮೇಲೆ ವಿವರಿಸಿದ ಘಟನೆಗಳಲ್ಲದೆ, ಸಕಲೇಶಪುರದ ತೋಟ ಗದ್ದೆ ಎಸ್ಟೇಟಿನ ದೇವಪ್ಪಗೌಡರ ಭೂತ ಚೇಷ್ಟೆಯ ನಿವಾರಣೆಯ ಹಿಂದಿರುವ ಪೂರ್ವ ಜನ್ಮ ಸ್ಮರಣೆಯೇ ಮೊದಲಾದ ನೂರಾರು ಘಟನೆಗಳು ಅವರ ಜೀವನದಲ್ಲಿ ನಡೆದು ಹೋಗಿವೆ. ಅವನ್ನೆಲ್ಲ ವಿವರಿಸುವುದು ನಮ್ಮ ಉದ್ದೇಶವಲ್ಲ.[39] ಕೆಲವು ಘಟನೆಗಳನ್ನು ಮಾತ್ರ ಇಲ್ಲ ವಿವರಿಸಿದೆ, ಅವರ ವಾಕ್ ಸಿದ್ಧಿ, ಪ್ರಬಲ ಸಂಕಲ್ಪ, ದುಷ್ಟ ಶಿಕ್ಷೆ, ಶಿಷ್ಟ ಪಾಲನಾದಿಗಳು ಈ ಘಟನೆಗಳಿಂದ ತಿಳಿದು ಬರುವುವು.

( ಮುಗಿಯಿತು )

39. ತೋಟ ಗದ್ದೆ ಎಸ್ಟೇಟಿನ ದೇವಪ್ಪಗೌಡರ ಭೂತ ಚೇಷ್ಟೆಯನ್ನು ನಿವಾರಿಸಿದ ಕಥೆ ಅವರ ಜೀವನ ಚರಿತ್ರೆಯು ಒಂದಂಗವಾಗಿ ಈ ಹಿಂದೆಯೇ ಬಂದಿದೆ. ಅಲ್ಲಿ ಅವಲೋಕಿಸುವುದು.

## ಜಾನಪದ ಜೋಗತಿ ಪದ

—ಕೆ, ವಿರೂಪಾಕ್ಷಗೌಡ

ತಂದುನಾನ ತಾನಂದುನಾನ
ತಾನೇ ಬಂದಾಳ ದೇವಿ ತಂದುನಾನ ॥ಪ॥
ಮಾಯಕಾರ್ತಿ ಹುಲಿಗೆವ್ವ ತಂದುನಾನ
ಮಾಯತಂತ್ರ ಆಗತಾಳ ತಂದುನಾನ ॥
ಗಂಜಿ ಸೀರಿ ಉಟ್ಟ್ಯಾಳ ನೋಡು ತಂದುನಾನ
ಗಂಧದ ಬಟ್ಟು ಇಟ್ಟ್ಯಾಳ ನೋಡು ತಂದುನಾನ ॥
ಓರಗಲ್ಲು ಪಟ್ಟಣದೊಳಗ ತಂದುನಾನ
ಹುಳುಕ ಬಳುಕ ಬದ್ನಿಕಾಯಿ ತಂದುನಾನ ॥
ಪೆಟ್ಟುಬಡದ ಉಳ್ಳಾಗಡ್ಡಿ ತಂದುನಾನ
ತುಂಬು ಕೊಳೆತ ಮೆಣಸಿನಕಾಯಿ ತಂದುನಾನ ॥
ಮುರಿದ ಮೂಲಂಗಿಗಡ್ಡಿ ತಂದುನಾನ
ಶಾವಿಪಲ್ಲೆ ಚಿಕ್ಕಿಪಲ್ಲೆ ತಂದುನಾನ ॥



# ಪವಾಡಗಳು

—ಹೆಚ್. ದೇವೀರಪ್ಪ

ಪವಾಡ ಎಂದರೆ ಅತ್ಯದ್ಭುತ ಸಾಹಸಕಾರ್ಯ, ಸಾಮಾನ್ಯ ಮಾನವನಿಂದ ಸಾಧ್ಯವಾಗದ, ಒಂದೊಂದು ವೇಳೆ ನಿಸರ್ಗನಿಯಮಕ್ಕೂ ವಿರುದ್ಧವಾದ ಅದ್ಭುತಗಳನ್ನು ತೋರಿಸಿದ್ದಾರೆ. ಅಘಟಿತ ಘಟಿತರು ಮಹಾಮಹಿಮರು. ಅವರಶಕ್ತಿ ಸಾಹಸಗಳನ್ನು ಲೌಕಿಕ ವಿಜ್ಞಾನ ಸಮರ್ಥಿಸಲಾರದು 'ಅದ್ಭುತ' 'ದೃಷ್ಟ' 'ದಿವ್ಯ' ಗಳಿಗೆ ವೀರಶೈವರು ಪವಾಡಗಳು ಎಂದು ಕರೆದಿದ್ದಾರೆ. ಬಸವಣ್ಣನವರೂ ಪವಾಡ ಮೆರೆದಿದ್ದಾರೆ. ಅಷ್ಟಕ್ಕೇ ಅವರು ಮಹಾಮಹಿಮರು, ಮಹಾಯೋಗಿಗಳು ಆಗಲಾರರು. ಆದರೆ ಪ್ರತಿವಾದಿಗಳ ಬಾಯಿ ಮುಚ್ಚಿಸುವುದಕ್ಕಾಗಿ ಮಗುದ ಮಂದಿಯನ್ನು ಬಹು ಬೇಗನೆ ಸನ್ಮಾರ್ಗಕ್ಕೆ ತಿರುಗಿಸುವುದಕ್ಕಾಗಿ ಪವಾಡ ಪದ್ಧತಿಯನ್ನು ಅನುಸರಿಸಿದರು. ಅವರೇ ಹೇಳಿದ್ದಾರೆ.

'ಎಂಬತ್ತೆಂಟು ಪವಾಡವ ಮೆರೆದು ಹಗರಣದ ಚೋಹದಂತಾಯಿತ್ತೆನ್ನ ಭಕ್ತಿ, ತನುವಿನೊಳಗೆ ಮನಸಿಲುಕದೆ, ಮನದೊಳಗೆ ತನುಸಿಲುಕದೆ; ತನುಅಲ್ಲಮನಲ್ಲಿ ಸಿಲುಕಿತ್ತು ಮನ ಚೆನ್ನಬಸವಣ್ಣನಲ್ಲಿ ಸಿಲುಕಿತ್ತು, ನಾನೇತರಲ್ಲಿ ನೆನೆವೆನಯ್ಯಾ, ಕೂಡಲ ಸಂಗಮದೇವಾ

ಆ ಎಂಬಂತ್ತೆಂಟು ಪವಾಡಗಳು ಯಾವುವು ಎಂಬುದನ್ನು ಮೊದಲು ಪಟ್ಟಿ ಮಾಡ ಹೊರಟವನು ಸಿಂಗಿರಾಜ:

ಚಾರುಭಟ ಬಳವ ಪ್ರತಿನಾದ ಮುಖದಿಂ ನೆಗಳ್ದ, ಕಾರಣ ಪವಾಡದರು ವತ್ತು ನಾಲ್ಕನು ಭಕ್ತಿ
ಚಾರಿತ್ರ ಭಾವ ನಿಷ್ಠಾ ಪವಾಡಗಳ ನಿಪ್ಪತ್ತು ನಾಲ್ಕು ಭಯ ಸ್ಥಳಕೆ
ಸೇರಿದೆಂಬತ್ತೆಂಟು ದಿವ್ಯವಾದಂಗಳು............

ಎಂದಿದ್ದಾನೆ. ಕಾರಣ ಪವಾಡಗಳು ಅರವತ್ತು ನಾಲ್ಕು, ಚಾರಿತ್ರ ಭಾವ ನಿಷ್ಠಾ ಪವಾಡಗಳು ಇಪ್ಪತ್ತು ನಾಲ್ಕು, ಒಟ್ಟು ಎಂಬತ್ತೆಂಟು ಆಯ್ತು. ವಚನದ ಇಂಗಿತ: ಅನೇಕ ಪವಾಡಗಳನ್ನು ಮೆರೆದುದು—ಬೊಂಬೆಯಾಟದ ಬೊಂಬೆಯಾಡಿದಂತೆ ಆಯಿತು ಎಂದು ಅಷ್ಟೆ. ಸಿಂಗಿರಾಜ ಆ ಎಂಬತ್ತೆಂಟು ಯಾವುವು ಎಂಬುದನ್ನು ವಿವರಿಸಲು ಹೊರಟಿದ್ದಾನೆ. ಅವರು ಮೆರೆದರೆಂದು ಹೇಳುತ್ತಿರುವ ಹಲವು ಪವಾಡಗಳಿಗೆ ಮೂಲ ಅವರ ವಚನಗಳಿಗೆ ಉದಾಹರಣೆಗೆ,

'ನೀನೊಲಿದಡೆ ಕೊರಡು ಕೊನರುವುದಯ್ಯ ನೀನೊಲಿದಡೆ ಬರಡುಹಯನ ಹುದಯ್ಯ ನೀನೊಲಿದಡೆ ವಿಷವೆಲ್ಲ ಅಮೃತವ ಹುದಯ್ಯ, ನೀನೊಲಿದಡೆ ಸಕಲ ಪಡಿ ಪದಾರ್ಥ, ಇದಿರಲ್ಲಿರ್ಪುವು ಕೂ. ಸಂ. ದೇವ'

ಇದನ್ನು, ಪುರಾಣಕಾರರು ತನ್ನ ಮೂಗಿನ ನೇರಕ್ಕೆ ಅರ್ಥಮಾಡಿಕೊಂಡರು. ಒಂದು ಬಸವಪುರಾಣದ ಒಂದು ಪವಾಡಕತೆ. ಮೊರಟದ ಬಂಕಿದೇವನಲ್ಲಿಗೆ ಒಬ್ಬ ಜಂಗಮ, ನಡು ರಾತ್ರಿಯ ಹೊತ್ತಿನಲ್ಲಿ 'ಎಮ್ಮ ಲಿಂಗ ವೇಳೆಗದು ತಾನೊಂದು ಗೊಡ್ಡಿನನ ಹಾಲುಮಂ, ಹೊಸಬೆಲ್ಲ ಪತ್ರೆ' ಬೇಕು. ಇಲ್ಲದಿದ್ದರೆ 'ಉಪವಾಸ' ಎಂದ. ಆಗ ಬಂಕಣ್ಣ, ಅಂತಹ ಅವೇಳೆಯಿಲ್ಲಿಯೂ

'ಆತ್ಮದೊಳಿನಿತು ಕೊಂಕದೆ, ಭಿನ್ನವಾಗದೆ ಗೊಡ್ಡನಾಗಳೆ ಹೋಗಿ ಹಿಡಿತಂದು'

ಒಂದು ಗೂಟದೊಳಂತು ಸಂದಿಸಿ
ಇಂದು ಮೌಳಿಯ ಭಕ್ತರಂ ಮುದ
ದಿಂದ ನೆನೆದೀ ಕೊರಡಿ ನಿಂದವೆ ಬೆಲ್ಲಪತ್ರೆಯುಮಂ ‖
ಮುಂದೆ ಕಟ್ಟಿರ್ದೀ ಬರಡುಪಶು
ವಿಂದೆ ಹಾಲಂಮಿಗೆ ಪಡೆವೆ ನಾ
ನೆಂದು ಗಡಿಗೆಯ ನಾಕ್ಷಣವೆ ತೊಳೆತಂದು ಕರೆಯಲ್ಕೆ ।

"ಬರಡು ಕುಂಭವು ತುಂಬ ಕರೆಯಲು ಕೊರಡು ಕೊನರಲು" ಹಾಲನ್ನೂ ಬಿಲ್ವಪತ್ರೆಯನ್ನೂ ಕೊಟ್ಟ, ಶಿವಕಾರುಣ್ಯದ ಮಹತ್ವವನ್ನು ಬಸವಣ್ಣನವರು ಹೇಳುತ್ತ ತಮ್ಮ ವಚನದಲ್ಲಿ ಮೊರಟ ಬಂಕದೇವನ ಮಹಿಮೆಯನ್ನು ಹುದುಗಿಸಿದ್ದಾರೆ. ಇದೇ ಕಥೆಯನ್ನು ಸಿಂಗರಾಜ ಬೇರೊಂದು ರೀತಿಯಲ್ಲಿ ಹೇಳಿದ್ದಾನೆ ಇಲ್ಲಿ 'ಹೊಸಹಾಲನೇ ಮದ' ಜಂಗಮನಿಗೆ ಉಗ್ರಾಣದ ಎತ್ತಿನ ಮೈದಡವಿ, ಹಸ್ತ ಪೌರುಷ ಪ್ರಭಾವದಿಂದ ಹಾಲ್‌ಕರೆದುಕೊಟ್ಟ. ಮತ್ತಿಗಟ್ಟದ ಪಾಳು ಎಂಬಲ್ಲಿ ಇಂತಹುದೇ ಇನ್ನೊಂದು ಗೊಡ್ಡು ಪಶುವಿನಿಂದ ಹಾಲುಕರೆದುಕೊಟ್ಟದ್ದ. ಹಾಲಾಹಲವನ್ನು ಅಮೃತವನ್ನಾಗಿ ಮಾಡಿದ ಪವಾಡ, ತೊಗರಿಯನ್ನು ಮುತ್ತುಗಳನ್ನಾಗಿ ಮಾಡಿದ್ದು–ಇಂತಹ ಕೆಲವು ಕತೆಗಳಿಗೆ ವಚನಗಳಲ್ಲಿರುವ ಕೆಲವು ನಾಮಿತಿ, ಉಪಮೆ, ರೂಪಕಗಳೇ ಬೀಜಗಳು.

ಕೆಲವೊಂದು ವಿಶಿಷ್ಟ ಸನ್ನಿವೇಶಗಳಲ್ಲಿ ಬಸವಣ್ಣನವರು ಸೂಳ್ನುಡಿಗಳನ್ನಾಡಿದ್ದೂ ಉಂಟು. ಅಂತಹ ಸನ್ನಿವೇಶವು ಪುರಾಣಕಾರರ ಗಮನವನ್ನು ಸೆಳೆದಿರುತ್ತವೆ.

'ಆಕಳು ಕಳ್ಳರು ಕೊಂಡರೆನಬೇಡೆಲವೊ, ಸಂಗಕೊಂಡನೆಂಬೊ ಮಾತಾಡದಿರೆ ಲವೊ ಲಿಂಗ ಕೊಂಡನೆಂಬೊ ಗಳಹದಿರೆಲವೊ ಅಲ್ಲಿ ಉಂಬನು ಸಂಗ ಇಲ್ಲಿ ಉಂಬನು ಸಂಗ ಕೂಡಲ ಸಂಗಮದೇವನೇಕೋಭಾವ'





ಈ ವಚನ ಬಸವರಾಜದೇವರ ರಗಳೆಯಲ್ಲಿ ಒಂದು ರಸಪೂರ್ಣ ಸನ್ನಿವೇಶವಾಗಿ ಕಂಗೊಳಿಸುತ್ತಿದೆ. ಕೀಲಾರ, ಕ್ಷೀರಾಗಾರ (Dairy)ದ ಹಸುಗಳನ್ನು ಕಳ್ಳರು ಅಟ್ಟಿ ಕೊಂಡು ಹೋದರು ಎಂಬ ಸಂಗತಿಯನ್ನು ಬಸವಣ್ಣನವರು ಕೇಳಿದರೆಂದೂ, ಕರುಗಳು ತಾಯಿಯಿಂದ ಅಗಲಿರಬಾರದೆಂದು ಕರುಗಳನ್ನೂ ಗೋವುಗಳಿದ್ದಲ್ಲಿಗೆ ಕಳುಹಿಸಿದರೆಂದು, ಅದನ್ನು ಕಂಡು ಕಳ್ಳರ ಹೃದಯಗಳೂ ಪರಿವರ್ತನೆ ಹೊಂದಿದುವೆಂದೂ ಸಿಂಗಿರಾಜ ಪುರಾಣದ ಒಂದು ಹೇಳಿಕೆ.

ಇನ್ನೊಂದು ಕತೆ, ಬಸವಣ್ಣನವರ 'ಅಸಂಗ್ರಹ' ವ್ರತಕ್ಕೆ ಸಂಬಂಧಿಸಿದ್ದು, ತಮ ಗಾಗಿ, ತಮ್ಮ ಮಡದಿಮಕ್ಕಳಿಗಾಗಿ ಏನನ್ನೂ ಕೂಡಿಡಬಾರದೆಂಬುದು ಅವರ ವ್ರತಗಳ ಲ್ಲೊಂದು. ಒಂದು ಸಲ ಕಳ್ಳನೊಬ್ಬ ಸಂಕ್ರಾಂತ್ರಿಯ ಸಮಯದಲ್ಲಿ ಕಾವಲರ ಕಣ್ಣು ತಪ್ಪಿಸಿ ಬಸವಣ್ಣನವರ ಮಹಾಮನೆಗೆ, ಪ್ರವೇಶಿಸಿ. ಗಂಗಾದೇವಿಯ ಮೈಮೇಲಿದ್ದ ಒಡವೆಗಳನ್ನು ಸುಲಿದುಕೊಳ್ಳುತ್ತಾನೆ, ಓಲೆಗೆ ಕೈಹಾಕುತ್ತಾನೆ. ಗಂಗಾದೇವಿ ನೋವನ್ನು ತಾಳಲಾರದೆ, 'ಹೋ ಹಾಲೆ ಹರಿಯಿತ್ತು.' ಎಂದ ಕೂಡಲೆ ಬಸವಣ್ಣನ ವರು ಎಚ್ಚರಗೊಂಡು.

"ಒಡನಿರ್ದ ಸತಿಯೊಂದು ನಚ್ಚಿರ್ದೆನಯ್ಯ, ಕಯ್ಯಿಡಿದ ಸಜ್ಜನೆಯೆಂದು ನಂಬಿರ್ದೆನಯ್ಯ, ಅಯ್ಯೋ ನಮ್ಮಯ್ಯನ ಕೈ ನೊಂದಿತು, ತೆಗೆದುಕೊಡಾ ಎಲೆ ಚಂಡಾ ಲಗಿತ್ತಿ ಕಳ್ಳನ ಮನೆಗೊಬ್ಬ ಬಲುಗಳ್ಳ ಬಂದಡೆ ಕೂಡಲ ಸಂಗಮ ದೇವನಲ್ಲದೆ ಆರೂ ಇಲ್ಲ." –ತನಗೋಸ್ಕರ ಏನನ್ನೂ ಸಂಗ್ರಹಿಸಿಟ್ಟುಕೊಳ್ಳಬಾರದೆಂಬ ವ್ರತವನ್ನ ಇಲ್ಲಿ ಚಿತ್ರಿಸಿದೆ.

ಇಂತಹವು ಕೆಲವು ಪವಾಡಗಳು. ಇನ್ನು ಕೆಲವಿವೆ. ಅವು ಗಾಂಧಿಟೊಪ್ಪಿಗೆ ಇದ್ದಂತೆ ಯಾರ ತಲೆಗೂ ಹವಣಾಗುತ್ತವೆ. ತಲೆಯಿಂದ ತಲೆಗೆ ಚಲಿಸುತ್ತಿರುತ್ತವೆ. ಯಹೋದ್ಯ ಪ್ರವಾದಿ ಹರಿಯುವ ನದಿಯನ್ನು ಸೀಳಿ ದಾರಿಮಾಡಿಕೊಂಡು ಮುಂದು ವರಿದ, ಶ್ರೀ ಕೃಷ್ಣ ಇನ್ನೂ ಎರಡು ಗಳಿಗೆಯ ಕೂಸಾಗಿದ್ದಾಗಲೇ ಈ ಪವಾಡವನ್ನು ಮೆರೆದ, ಬಸವಣ್ಣ ಏನು ಕಡಿಮೆಯೆ? ಕೃಷ್ಣಾನದಿ ಅವನಿಗೆ ದಾರಿ ಬಿಡಲಿಲ್ಲವೆ. ಬ್ರಾಹ್ಮಣಬಾಲಕನನ್ನು ಕೊಂದವನೆಂದು ಅಪವಾದ ಹೊದಿಸಿ ಅವರನ್ನು ಬಡಿದು ಹಾಕಲು ಬೆನ್ನು ಹತ್ತಿದ್ದ ಮಿತ್ರರು ಅವನನ್ನು ಬೆನ್ನಟ್ಟದಾಗ. ದ್ರೌಪದೀ ವಸ್ತ್ರಾಪ ಹರಣ ಶ್ರೀ ಕೃಷ್ಣನ ಕೃಪಾರಕ್ಷೆ–ಈ ಕಥೆಗೊತ್ತಿದೆ ನಮಗೆ. ಹಾಗೆಯೇ ಮಿಂಡ ಜಂಗಮನೊಬ್ಬ ಬಂದು ಬಸವಣ್ಣನ ಮಡದಿ ಉಟ್ಟಿದ್ದ ಸೀರೆ ಬೇಕೆಂದಾಗ, ಗಂಗಾಂ ಬಿಕೆಯನ್ನು ಸಭೆಗೆ ಕರೆಸಿದ್ದೂ ಆಕೆಯ ಸೀರೆಯೂ ಅಕ್ಷಯವಾದದ್ದೂ ಬಸವ ಪುರಾಣ ದಲ್ಲಿರ ಬೇಡವೆ. ಹನುಮಂತ ಬೆಟ್ಟವನ್ನೆತ್ತಿದನೆ? ನಮ್ಮ ನಾಗಿದೇವ ಕಂಬಳಿನಾಗಿ ದೇವ ಕಿರುಬೆರಳಿನಿಂದ ಬೆಟ್ಟವನ್ನೆತ್ತಿದ ಪವಾಡ ಕತೆಗಳು ಜೀಜಗಳು ಗಾಳಿಯಲ್ಲಿ

ತೇಲಾಡುತ್ತಿರುತ್ತವೆ ತಮಗೆ ಅನುಕೂಲವಾದ ಕ್ಷೇತ್ರ ಸಿಕ್ಕಿದೊಡನೆ ಅಲ್ಲಿ ಬೇರೂರಿ ಬೆಳೆದು ಬಿಡುತ್ತವೆ.

ಬಸವಣ್ಣನವರನ್ನು ಸಿಂಗಿರಾಜ ಚಿತ್ರಿಸುವ ಮೂಲಕ ವ್ಯಕ್ತಿತ್ವ ಪ್ರಭಾವ ಎಂತ-ಹುದಿತ್ತೆಂಬುದನ್ನು ತೋರಿಸಿ ಕೊಟ್ಟಿರುವನೆಂಬುದನ್ನು ನಾವು ಗಮನಿಸಬೇಕು. ಪವಾಡ ಕತೆಗಳನ್ನು ಜೀವನದ ವಾಸ್ತವಿಕ ಚಿತ್ರಗಳೊಂದಿಗೆ ಹಣೆದು, ಬಸವಣ್ಣನೂ ಸಾಮಾನ್ಯಮಾನವರಂತೆಯೇ ತನಗೆರಗಿದ ಕಷ್ಟಪರಂಪರೆಗಳನ್ನು ಎದುರಿಸಿದನೆಂಬುದನ್ನು ನಿರೂಪಿಸಿದ್ದಾನೆ. ಒಂದು ಸಲ, ಬಸವಣ್ಣನವರು ಅಧಿಕಾರವನ್ನು ತ್ಯಜಿಸಿ ಕಲ್ಯಾಣ ಪಟ್ಟಣವನ್ನು ಬಿಟ್ಟು ಹೋಗುವ ಸನ್ನಿವೇಶ ಒದಗಿತು. ಗಣಪರ್ವ–ಅಂದರೆ ಜಂಗಮರ ಬೃಹಜ್ಜಾತ್ರೆಯನ್ನು ಕಂಡು ವಿಶೇಷವೇನೆಂದು ಕೇಳುತ್ತಾನೆ ಬಿಜ್ಜಳ. ವೈಯೆಲ್ಲ ಚಿನ್ನ ಕಿವಿ ಮಾತ್ರ ಹಿತ್ತಾಳೆ ಅವನಿಗೆ, ಬಸವಣ್ಣನವರ ವಿರೋಧಿಗಳು ಕೆಲವರು ಗಣಪರ್ವಕ್ಕಾಗಿ ಅರಮನೆಯ ಐಶ್ವರ್ಯವೆಲ್ಲ ಪೋಲಾಗುತ್ತಿದೆ. ಎಂದು ಚುಚ್ಚಿದರು. ಹತ್ತೆಂಟು ಲಕ್ಷ ಜಂಗಮರು. ಬಿಜ್ಜಳ ಬಸವಣ್ಣನವರನ್ನ ಕರೆದಾಬೃಹತ್ ಪ್ರಮಾಣದ ಪರ್ವಕ್ಕೆ ನಿನಗೆ ಹಣ ಎಲ್ಲಿಂದ ಬಂದಿತು ಕುಬೇರನ ಐಶ್ವರ್ಯ ಸಾಲದಲ್ಲ ಇಂತಹ ಅದ್ದೂರಿ ಉತ್ಸವಕ್ಕೆ ಅನ್ನುತ್ತಾನೆ. ಬಸವಣ್ಣನವರಿಗೂ ಗೊತ್ತು. ಚಾಡಿ ಆತನ ಮನಸ್ಸನ್ನು ಛಿದ್ರಗೊಳಿಸಿದೆ ಎಂದು. ಕೊಡುವಾತ ಸಂಗ ಕೊಂಬಾತ ಎಂಬುದೇ ಅವರ ಉತ್ತರ. ಮಾತಿಗೆ ಮರುಮಾತು. ಕಡೆಗೆ, “ ಹಾಳುಹರಿ ಲಿಂಗಿಗಳಿಗಿಕ್ಕುಹಂ ಮಾಣು, ಮಾಣದೊಡೆ ಮುದ್ರೆಯುಂಗುರಗೊಡು ” ಎಂದಾಗ ಬಸವಣ್ಣನವರು ಮುದ್ರೆಯನ್ನು ಕೊಟ್ಟು ಬಿಡುತ್ತಾರೆ. ಅರಸು ಮುನಿದರೆ ನಾಡೊಳಗಿರಬಾರದಷ್ಟೆ. ಹೊರಟರು. ಇನ್ನೊಂದು ರಾಜಾಜ್ಞೆ ಯಾಗುತ್ತದೆ. “ ತಾನಿಪ್ಪ ಮಂದಿರವದೆಮ್ಮದು, ಅದ ಮುದ್ರಿಸಿ ಈತನ ಸತಿ ಸುತಗ್ರಜೆ ಸಹಿತ ಲಾತನ ಕಂದ ಸಹಿತ, ಅರುವರ– ( ಆರುಜನರ– ಬಸವಣ್ಣ, ಗಂಗಾಂಬಿಕೆ, ನೀಲಾಂಬಿಕೆ, ಅಕ್ಕನಾಗಮ್ಮ, ಶಿವದೇವ, ಚೆನ್ನಬಸವಣ್ಣ ) ಅವರ “ ವಸ್ತ್ರಗೊಂಡು ಒಂದೊಂದು ಜೀರ್ಣಗಪ್ಪಡಗೊಟ್ಟು ” ಹೊರಡಿಸಿ ಎಂದು. ಕಾಳಿಮರಸ ಬಂದು, ಬಸವಣ್ಣ ಇನ್ನಾದರು ಆ ಕಿಡಿಗೇಡಿ ಜಂಗಮರ ಸಹವಾಸ ಬಿಡು. ಒಡೆಯರಲ್ಲಿ ಕ್ಷಮಾಪಣೆ ಕೇಳಿಕೊ ಎಂದು ಬುದ್ಧಿ ಹೇಳುತ್ತಾನೆ. ಬಸವಣ್ಣನವರು–

“ ಆರು ಮುನಿದು ಎಮ್ಮನೇನು ಮಾಡುವರಯ್ಯ, ಊರುಮುನಿದು ಎಮ್ಮನಂತು ಮಾಡುವರಯ್ಯ, ” ಎಂದು ನುಡಿದು ಮುಂದುವರಿಯುವರು. ನಾಗರಿರಾರೂ ಅವರಿಗೆ ಏನೇನೂ ಕೊಡಕೂಡದೆಂದು ಕಟ್ಟುಮಾಡಿ ಕಾವಲು ಕಟ್ಟಿಸಿದ– ಹರಿಶ್ಚಂದ್ರ ಚಾರಿತ್ರದ ಪುನರಾವರ್ತನೆಯುಂಟಾಗುತ್ತದೆ. ಬಿಜ್ಜಳನಿಗೆ ಹಿಗ್ಗು. ಅವನೆನ್ನುವುದ ಕೇಳಿ.



ಇನ್ನರಿಯ ಬಹುದಣ್ಣನಾಚರಣೆ ಭಕ್ತಿ ಸಂ
ಪನ್ನತೆಯ ಜಂಗಮದ ಮೇಲಣಕ್ಕರು ಸಂಗ
ಹೊನ್ನು ಕೊಡುವುನ್ನತಿಯ ತನ್ನ ನಿತ್ಯವ್ರತದ ನೇಮ ಸಂಪೂರ್ಣತೆಯನು
ಗನ್ನಗತಕಂ ತೋರಿ ಪೆಟ್ಟಿಗೆಗಳಂ ಬಾಚಿ
ಕನ್ನವಿಕಿಸಿ ಕೌತುರಂ ದೋಮ ಅಟಮಟದ
ಬಿನ್ನಣಕೆ ಬಿನ್ನಣವಿದೆನ್ನ ತರಸು ದುರ್ಜನರ ಮನಮಥಿಸುತ್ತಿದ್ದ ಮ ॥

ಇತ್ತ ಬಸವಣ್ಣನವರು ಅವರ ಬಂಧುಗಳು ಕಪ್ಪಡಿಯ ದಾರಿ ಹಿಡಿಯುತ್ತಾರೆ. ಅವರನ್ನು ಒಬ್ಬ ಶಿವಭಕ್ತ ಎದುರುಗೊಳ್ಳುತ್ತಾನೆ. ಆತನಿಗೆ ಇವರಾರೆಂಬುದು ತಿಳಿಯದು. ರೊಟ್ಟಿ ಬುತ್ತಿ, ಅಡಿಗೆಯ ಸಾಹಿತ್ಯ–ಇವನ್ನೆಲ್ಲ ಒಳಗೊಂಡಿದ್ದ ಒಂದು ಕಂಟಣೆಯ ಚೀಲದಲ್ಲಿ ಹಾಕಿ, ಅದನ್ನು ಒಂದು ಬರಡು ಹಸುವಿನ ಮೇಲೆ ಹೇರಿಕೊಂಡು ಬರುತ್ತಿರುತ್ತಾನೆ. ಯಾರು ಕಾಣದಿದ್ದ ಆ ತಗ್ಗಾಡಿನಲ್ಲಿ ಉರಿಬಿಸಿಲಿನಲ್ಲಿ ಕಲ್ಲು ಮುಳ್ಳು ತುಂಬಿದ ಹಾದಿಯಲ್ಲಿ ಇವರನ್ನು ಕಂಡು ಬಸವಣ್ಣನವರು ಅವರೆಲ್ಲ ಆತನಿಗೆ ನಮಸ್ಕರಿಸುತ್ತಾರೆ. ಆತನ ಬಾಯಲ್ಲಿ ಬಂದ ಮಾತುಗಳಿವು ಎಷ್ಟು ಧ್ವನಿಪೂರ್ಣವಾಗಿವೆ ನೋಡಿ. (ತಾನು ಶರಣು ಮಾಡಿಸಿಕೊಂಡದ್ದು ಬಸವಣ್ಣನವರಿಂದ ಅವನ ಅಕ್ಕ ಅಳಿಯ–ಪತ್ನಿಯರಿಂದ ಎಂಬುದನ್ನು ಅರಿಯ.

“ ಇವರೆಲ್ಲ ಪದಕೆಜಿಗಲಾಯಯ್ಯನೆತ್ತಿ ಶಿವವಸ್ತ್ರೀವುತಿದು ಬಸವನಿಹ
ಪಟ್ಟಣದ ಪ್ರಾತವಾಗೆಲ್ಲ ಭಕ್ತಿಯುತರಾಹ ”

ಎಂದು ಮತ್ತೆ ತುಂಬು ಹರುಷದಿಂದ

“ ಅವು ಪರದೇಶದಿಂ ಭಕ್ತಿಶ್ರೀ ”

ಮಂತ ಬಸವನ ಕಾಣಬಂದ ಫಲಗೊಂಡೋಲಾಯ್ತು ಎಮಗಿಂದು ನಿಮ್ಮ ಕಂಡು
ಇಂತಹ ಸದಾಚಾರಯುತ ಸುಖಿಸಮೂಹವೀ
ಕಾಂತಾರದೋಳ್ ಕಾಲದುಗ್ರಾತಪಾಗ್ನಿದುಃ
ಖಾಂತರವನೇಕೆ ಶಿವ ಮಾಡಿದಂ ನಿಮಗೆ, ನೀವಾರು ಇದೆಲ್ಲಿಂದೆಲ್ಲಿಗೆ ಪೋಪರೀ

ಬಸವಣ್ಣನವರ ಪ್ರಭಾವ ಅವರ ಜೀವಿತ ಕಾಲದಲ್ಲಿಯೇ ಅಷ್ಟು ! ಅವರಿಗೂ ಅತಿಶಯವಾದ ಸಂತೋಷವಾಗಿರಬೇಕು. ಅದೇ ಸಮಯದಲ್ಲಿ ಕಲ್ಯಾಣದಿಂದ ಇವರನ್ನು ಹುಡುಕಿಕೊಂಡು ಬರುತ್ತಾನೆ. ಹಾಲಸರ್ವೇಶನೆಂಬ ಜಂಗಮ. ಅವನದು ಹೊಸ ಹಾಲನ್ನೆ ಲಿಂಗಕ್ಕರ್ಪಿಸುವ ನೇಮ. ಬಸವಣ್ಣ, ಅಲ್ಲಿಯೇ ಇದ್ದ ಗೊಡ್ಡಾಕಳಿನ ವೈದಡವಿ, ಕರಪರುಷ ಮನಪರುಷ ಭಾವಪರುಷ ಪ್ರಭಾವದಿಂದ ಅದರ ಮೊಲೆಯಿಂದ ಹಾಲುಕರೆದು ಹಾಲ ಸರ್ವೇಶನಿಗೆ ಕೊಡುತ್ತಾರೆ. ಮುಂದೆ ಸರ್ಪವನ್ನೇ ರತ್ನಹಾರವನ್ನಾಗಿ ಪವಾಡ ಇನ್ನೂ ಸ್ವಾರಸ್ಯವಾಗಿದೆ–ಮೂಲವನ್ನು ಓದಿಯೇ ಅದರ ಸ್ವಾರಸ್ಯವನ್ನು ಸವಿಯಬೇಕು. ಇಂತಹ ಹಲವು ಪ್ರಸಂಗಗಳಿವೆ.

ಸಿಂಗಿರಾಜನು ಬಸವಣ್ಣನವರನ್ನು ಶಿವಭಕ್ತಿಯ ಸಾಕಾರ ಸ್ವರೂಪ ಎಂದೇ ತಿಳಿದಿರುವುದು. ಭೂರುದ್ರ, ಮಾನವ ಮಹಾದೇವ, ಪರಬ್ರಹ್ಮ ಪಂಚಾಸ್ಯ ಆದಿ ಬ್ರಹ್ಮಾಚಾರ್ಯ, ಎಂದು ಮೊದಲಾಗಿ ಹಲವಾರು ಪ್ರಸಂಗಗಳನ್ನು ನಿರೂಪಿಸುವಾಗ ಕೊಂಡಾಡಿದ್ದಾನೆ. ಆತ ಸರ್ವಜೀವ ದಯಾಪಾರಿ ಎಂಬುದು ಆಕಳು ಕಳ್ಳರನ್ನು ಒಳ್ಳೆಯವರನ್ನಾಗಿ ಮಾಡಿದ ಪವಾಡದಲ್ಲಿ ಹೇಳಿದೆ. ಅವರಿಗೆ ಗೊತ್ತು ತಮ್ಮನ್ನು ನಂಬಿದ ಪರಮ ಶಿವನು ಎಂದೆಂದಿಗೂ ಕೈ ಬಿಡುವುದಿಲ್ಲವೆಂಬುದು. ಅವನಲ್ಲಿದ್ದ ಇನ್ನೊಂದು ಇವರ ಕ್ಷಮಾಗುಣ. ಇವರನ್ನು ಮೋಸಗೊಳಿಸಬೇಕೆಂದು ಬಂದ ಕಳ್ಳರು ಕುಹಕಿಗಳು, ಇವರೊಡನೆ ವಾದಿಸಿ ಸೋಲಿಸಿ ತೆಜೋವಧೆ ಮಾಡಿಬಂದ ಪರವಾದಿಗಳು, ಇವರಲ್ಲಿದ್ದ ಒಂದು ಅನಿರ್ವಚನೀಯವಾದ ದಿವ್ಯ ಶಕ್ತಿಯ ಪ್ರಭಾವದಿಂದ ಪರಮ ಶಿವಭಕ್ತರಾಗಿ ಅವರ ಬಳಿಯಲ್ಲಿಯೇ ನೆಲಸಿ ಬಿಡುತ್ತಿದ್ದರು. ಇಂತಹ ಒಂದು ಆಕರ್ಷಣಶಕ್ತಿ, ಕ್ಷಮಾಗುಣ ಸರ್ವಸಮತಾ ಭಾವ ಇಲ್ಲದಿದ್ದರೆ ಬಸವಣ್ಣನವರಿಂದ ಮಾನ್ಯ ಕಲ್ಯಾಣ ಸಮಾಜವನ್ನು ಕಟ್ಟಲು ಸಾಧ್ಯವಾಗುತ್ತಿರಲಿಲ್ಲ. ಅವರನ್ನು ಬಯ್ಯುತ್ತ ಬಂದು ಬಾಯಿ ಭಜಿಸತೊಡಗುತ್ತಿದ್ದವ; ಹೊಡೆಯಲೆಂದು ಎತ್ತಿದ ಕಯ್ಗಳು ಮುಗಿಯುತ್ತಿದ್ದವು. ದಯವಿಲ್ಲದ ದರ್ವದದಾವುದಯ್ಯ ಎಂದು ಆಕ್ಷೇಪಿಸುತ್ತಿದ್ದ ಬಸವಣ್ಣನವರು ತಮ್ಮನ್ನು ಕೆಡಿಸಬೇಕೆಂದು ಕೊಲ್ಲಬೇಕೆಂದು ಬಂದ ಅಜ್ಞರಿಗಾಗಿ ಮಮ್ಮೆಲಮರುಗಿ ಅವರನ್ನು ಕ್ಷಮಿಸಿ ಒಳ್ಳೆಯ ಮಾತುಗಳಿಂದಲೇ ಸನ್ಮಾರ್ಗಕ್ಕೆ ತಿರುಗಿಸುತ್ತಿದ್ದರು. ಕ್ರಿಯಾರೂಪನಾದಬಿಜ್ಜಳನನ್ನೂ ಅವನ ಸಂಗಡಿಗರನ್ನೂ ಭಾವರೂಪನಾದ ಬಸವಣ್ಣ ಕ್ಷಮಿಸಿ ಶಾಪವಿಮುಕ್ತರನ್ನಾಗಿ ಮಾಡಿರುವುದು ಆತನ ಔದಾರ್ಯಕ್ಕೆ ಕಲಶಪ್ರಾಯವಾಗಿದೆ ಕಾವ್ಯ ಭಾಗಗಳನ್ನು ಓದಿ ವಿವರಿಸಿದ್ದರೆ ಈ ಮಾತುಗಳನ್ನು ಇನ್ನೂ ಸುಸ್ಪಷ್ಟವಾಗುವುವು. ಅದು ಈಗ ಸಾಧ್ಯವಿಲ್ಲ. ●

---

## ಮಳೆರಹಿತ ಮುಗಿಲು

—ಕೆ. ವಿರೂಪಾಕ್ಷಗೌಡ

ಬಂಜೆಯೋ ? ರಂಡೆಯೋ ? ಬಣಬಣನೆ ಬಿಕೋ ಎಂದು
ಬಿಲವಾರದಂತೆ ಒಣಹುಲ್ಲು ಮರ ಬಂದು
ವೈಶಾಖದಾ ನೆಲವು ಬಿಸಿಲನ್ನು ತಬ್ಬುತ್ತ
ನಿಷ್ಪ್ರಯೋಜಕ ಬಾಹು ನೀಡಿ ಭರದಿ
ಗೊಡ್ಡು ಮೈಗಳ ಸ್ನೇಹ ಯಾರಿಗೇನಂಥ ಹಿತ ?
ನೀರಿಲ್ಲದಾವರತೆಗೇತಕ್ಕೆ ಯಾತ ?



# ಇಂಧನ ಮತ್ತು ಔಷಧಗಳು

—ವೈ. ತುಳಜಪ್ಪ ಎಂ. ಎಸ್‌ಸಿ.,

ಷ್‌ಮೂ ಎಂಬುದು ಗ್ರೀಕ್ ಪುರಾಣಗಳಲ್ಲಿ ವಿವರಿಸಿರುವ ಒಂದು ಕಾಮಧೇನುವಿನಂತಿರುವ ಜೀವಿ. ಅದು ಮಿತಿಇಲ್ಲದಷ್ಟು ಹಾಲು, ಬೆಣ್ಣೆ ಹಾಗೂ ಮೊಟ್ಟೆಗಳನ್ನು ಕೊಡುವುದೆಂಬ ದಂತಕತೆ ಇದೆ. ಆದರೆ "ಸಸ್ಯಶಾಸ್ತ್ರದ ಷ್‌ಮೂ" ಎಂದು ಹೆಸರಾಗಿರುವ ಒಂದು ಮರದ ಸತ್ಯಕಥೆ ಬೆಳಕಿಗೆ ಬಂದಿದೆ. ಅದರ ಹೆಸರು "ಲ್ಯೂಕೀನ ಲ್ಯೂಕೋಸಿಫಾಲ".

ಉಷ್ಣವಲಯಗಳಲ್ಲಿ ಯಥೇಚ್ಛವಾಗಿ ಬೆಳೆಯುವ ಈ ಮರ ಐದೇ ವರ್ಷಗಳಲ್ಲಿ 65 ಅಡಿಗಳಷ್ಟು ಬೆಳೆಯಬಲ್ಲುದು. ಆದ್ದರಿಂದ ಕಾಡು ಶೀಘ್ರವಾಗಿ ಬೆಳೆಯಲು ಅತ್ಯಂತ ಸಹಕಾರಿ. ಈ ಮರದ ಪ್ರತಿಯೊಂದು ಭಾಗವೂ ಅತ್ಯುಪಕಾರಿ. ಎಲೆ ಮತ್ತು ಕಾಯಿಗಳಲ್ಲಿ ಸಸಾರಜನಕ ವಸ್ತುಗಳು ತುಂಬಿದ್ದು, ಮಕ್ಕಳು ಅವುಗಳನ್ನು ಕ್ಯಾಂಡಿಗಳಂತೆ ತಿನ್ನುತ್ತಾರೆ ಹಾಗೂ ದೊಡ್ಡವರು ಮೆಣಸು ಉಪ್ಪಿನ ಜೊತೆ ಸವಿಯುತ್ತಾರೆ. ಯಥೇಚ್ಛವಾಗಿ ಉದುರುವ ಈ ಎಲೆಗಳು ದನಕರುಗಳಿಗೆ ಪೌಷ್ಟಿಕ ಆಹಾರವೂ ಹೌದು. ಇದರ ಬೀಜಗಳನ್ನು ಪುಡಿಮಾಡಿ ಕಾಫಿಯಂಥ ಕಷಾಯ ಮಾಡಿ ಕುಡಿಯುತ್ತಾರೆ. ಆಶ್ಚರ್ಯವೆಂದರೆ ಈ ಮರದ ಬೇರುಗಳು ಕಾಂಡದ ಎತ್ತರದಷ್ಟೇ ಆಳವಾಗಿ ಭೂಮಿಯೊಳಗೆ ಬೆಳೆದು ಕೆಲವು ಶಿಲೀಂಧ್ರಗಳ ಸಹಕಾರದಿಂದ ಭೂಮಿಯೊಳಗಿನ ರಂಜಕವನ್ನೊಳಗೊಂಡ ಲವಣಗಳನ್ನು ಹೆಚ್ಚಾಗಿ ಹೀರುತ್ತವೆ. ಅಲ್ಲದೆ ಈ ಬೇರುಗಳಲ್ಲಿ ಸಾರಜನಕವನ್ನು ಶೇಖರಿಸಿ ಸಾರಜನಕ ಗ್ರಂಥಿಗಳನ್ನು ಉತ್ಪತ್ತಿಮಾಡುವ ಬ್ಯಾಕ್ಟೀರಿಯಾಗಳು ಭೂಮಿಯನ್ನು ಅತ್ಯಂತ ಫಲವತ್ತನ್ನಾಗಿ ಮಾಡುತ್ತವೆ.

ಇದರ ಉಪಯೋಗ ಇಷ್ಟೇ ಅಲ್ಲ. ಮರದ ಕಾಂಡವು ಅಡಿಗೆಗೆ ಇಂಧನ ಮರದ ತುಂಡುಗಳಿಂದ ಇದ್ದಲು ಮಾಡುವುದಲ್ಲದೆ, ಸಂಸ್ಕರಿಸಿದಾಗ ಉರಿಯುವ ಅನಿಲವನ್ನೂ ಇದರಿಂದ ತಯಾರಿಸಬಹುದಾಗಿದೆ. ಅಲ್ಲದೆ ಮರಮುಟ್ಟುಗಳ ತಯಾರಿಕೆಗೆ, ಹಾಗೂ ಕಾಗದ ಮಾಡಲು ಅತ್ಯಂತ ಉಪಯುಕ್ತ. ಜಗತ್ತಿನಲ್ಲಿ ದಿನೇ ದಿನೇ ಹಾಳಾಗುತ್ತಿರುವ ಕಾಡುಗಳ ಪುರ್ನನಿರ್ಮಾಣಕ್ಕೆ "ಲ್ಯೂಕೀನ ಲ್ಯೂಕೊಸಿಫಾಲ" ಒಂದು ದಿವ್ಯ ಭವ್ಯ ವೃಕ್ಷ.

ಬ್ರೆಜಿಲ್ ದೇಶದ ವಿಜ್ಞಾನಿಗಳು ಸೋಯಾಬೀನ್, ಕಡಲೆಕಾಯಿ, ಸೂರ್ಯಕಾಂತಿ ಹಾಗೂ ಹರಳು ಬೀಜಗಳಿಂದ ತೆಗೆದ ಎಣ್ಣೆಗಳಿಂದ ಯಂತ್ರ ವಾಹನಗಳನ್ನು

ನಡೆಸುವುದರಲ್ಲಿ ಯಶಸ್ವಿಯಾಗಿದ್ದಾರೆ. 1980 ನೇ ಸಾಲಿನಲ್ಲಿ ಸುಮಾರು 250,000 ಸಕ್ಕರೆಯಿಂದ ತೆಗೆದ ಹಾಲ್ಕೋಹಾಲ್‌ನಿಂದಲೇ ಅಲ್ಲಿ ಚಲಿಸಲ್ಪಟ್ಟವು. ಬ್ರೆಜಿಲ್‌ನ ಕಾಡುಗಳಲ್ಲಿ ಸುಮಾರು 400 ಗಿಡಮರಗಳು ಡೀಸಲ್ ಮತ್ತು ಪೆಟ್ರೋಲ್ ಇತರ ರಾಸಾಯನಿಕ ವಸ್ತುಗಳನ್ನು ಕೊಡುವ ಮೂಲಗಳಾಗಿವೆ. ಅವುಗಳಲ್ಲಿ 'ಕೊಪೈಬ' ಎಂಬ ಮರದಿಂದ ಚಿಮ್ಮಿ ಬರುವ ರಸವು 'ಡೀಸಲ್‌ನಂತೆಯೇ ಕೆಲಸ ಮಾಡುತ್ತದೆ. ಒಬ್ಬ ಬ್ರೆಜಿಲ್ ವಿಜ್ಞಾನಿ "ಜೋಸ್ ಗಿಲ್‌ಹರ್ವ್ ಮೈಯು" ಅವರ ಪ್ರಕಾರ 'ಕೊಪೈಬ'ದ ರಸವನ್ನು ಸಂಸ್ಕರಿಸದೇ ನೇರವಾಗಿ ವಾಹನಗಳಲ್ಲಿ ಡೀಜಲ್ ನಂತೆ ಉಪಯೋಗಿಸಬಹುದು.

## ಜೀವಕಣ ಸಮೂಹ ಕೃತಕವೃದ್ಧಿ ವಿಧಾನ
### ( Tissue Culture Technique )

ಪ್ರನಾಳದಲ್ಲಿ ಗಿಡ ಮರಗಳನ್ನು ಉತ್ಪತ್ತಿ ಮಾಡುವ ತಾಂತ್ರಿಕ ವಿಧಾನಗಳಲ್ಲಿ ವಿಜ್ಞಾನಿಗಳು ಈಗ ಸಾಕಷ್ಟು ಯಶಸ್ವಿಯಾಗಿದ್ದಾರೆ. ಈಗಾಗಲೇ ತೋಟಗಾರಿಕೆಗೆ ಸಂಬಂಧಿಸಿದ ಹಣ್ಣಿನ ಗಿಡಗಳು ಹಾಗೂ ಅಲಂಕಾರ ಗಿಡಗಳಾದ ಪೆಟೂನಿಯಾ, ಆರ್ಕಿಡ್‌ನಂಥ ಗಿಡಗಳನ್ನು ಯಥೇಚ್ಛವಾಗಿ ಉತ್ಪತ್ತಿ ಮಾಡಿದ್ದಾರೆ. ಇಂತಹ ವಿಧಾನವನ್ನು "ಜೀವಕಣ ಸಮೂಹ ಕೃತಕವೃದ್ಧಿ ವಿಧಾನ (Tissue culture method) ಎಂದು ಕರೆಯುತ್ತಾರೆ.

ಪ್ರಯೋಗಾಲಯಗಳಲ್ಲಿ ಅನೇಕ ರಾಸಾಯನಿಕ ವಸ್ತುಗಳಿಂದ ತಯಾರಿಸಿದ ಕೃತಕ ಆಹಾರಾಂಶಗಳನ್ನು ಗಾಜಿನ ಪ್ರನಾಳಗಳಲ್ಲಿ ಹಾಕಿ ಅದರ ಮೇಲೆ ಗಿಡ ಮರ ಗಳ ಭಾಗಗಳಾದ ಕಾಂಡದ ಚಿಕ್ಕ ಚಿಕ್ಕ ಚೂರುಗಳು ಎಲೆಯ ಭಾಗಗಳು, ಹೂ ಮೊಗ್ಗುಗಳೇ ಮುಂತಾದವುಗಳನ್ನು ಇಡುತ್ತಾರೆ. ಸುಮಾರು 10-15 ದಿನಗಳಲ್ಲಿ ಈ ಅಂಗಾಂಶಗಳು ಆಹಾರಾಂಶಗಳನ್ನು ಹೀರಿ ಆಶ್ಚರ್ಯಕರವಾದ ಬದಲಾವಣೆಗಳನ್ನು ತೋರಿಸುತ್ತವೆ. ಒಂದೊಂದು ಭಾಗದಿಂದಲೂ ತನ್ನದೇ ಜಾತಿಯ ನೂರಾರು ಸಣ್ಣ ಗಿಡಗಳ "ಗುಂಪುಗಿಡ" ಉತ್ಪತ್ತಿಯಾಗುತ್ತವೆ. ನಂತರ ಇವುಗಳನ್ನು ಹೂವಿನ ಕುಂಡಗಳಿಗೆ ಅಥವಾ ತೋಟಗಳಿಗೆ ವರ್ಗಾಯಿಸುತ್ತಾರೆ. ಆದ್ದರಿಂದ ಗಿಡ ಮರ ಗಳನ್ನು ಬೆಳೆಸಲು ಬರೀ ಬೀಜಗಳೇ ಮುಖ್ಯವಲ್ಲ. ಗಿಡದ ಬೇರೆಯಾವುದೇ ಜಾತಿಯ ಗಿಡವನ್ನು ಉತ್ಪತ್ತಿ ಮಾಡುವಷ್ಟು ಸಮರ್ಥವಾಗಿದೆ. ಕಡಿಮೆ ಜೀವಕಣ ಸಮೂಹ ಗಳನ್ನು ಈ ವಿಧಾನದಿಂದ ಬೆಳೆಸಿ ಹೆಚ್ಚು ಗುಂಪುಗಿಡಗಳನ್ನು ಉತ್ಪತ್ತಿ ಮಾಡುವುದ ರಿಂದ ಆರ್ಥಿಕವಾಗಿ ಇದು ಅತ್ಯಂತ ಉಪಯೋಗಕರ ವಿಧಾನ.



ಪ್ರಪಂಚದ ಅನೇಕ ಕಡೆಗಳಲ್ಲಿ ಈ ವಿಧಾನದಿಂದ ಲಕ್ಷಾಂತರ ಗಿಡಮರಗಳನ್ನು ಪ್ರನಾಳದಲ್ಲಿ ಉತ್ಪತ್ತಿಮಾಡಿ ಭೂಮಿಗೆ ವರ್ಗಾಯಿಸುತ್ತಿದ್ದಾರೆ. ಗಂಧದಮರ, ತೇಗ, ನೀಲಗಿರಿ, ಅನೇಕ ಆರ್ಕಿಡ್‌ಗಳು, ಶುಂಠಿ, ಅರಿಶಿಣ, ತಂಬಾಕು ಮುಂತಾದ ಉಪಯುಕ್ತ ಗಿಡಗಳನ್ನು ಈ Tissue culture ವಿಧಾನದಿಂದ ಅಸಂಖ್ಯಾತ ವಾಗಿ ಉತ್ಪತ್ತಿ ಮಾಡುವುದರಲ್ಲಿ ವಿಜ್ಞಾನಿಗಳು ಯಶಸ್ವಿಯಾಗಿದ್ದಾರೆ. ಅನೇಕ ರಾಷ್ಟ್ರಗಳಲ್ಲಿ ಇದೊಂದು ವಾಣಿಜ್ಯವ್ಯಾಪಾರವಾಗಿಬಿಟ್ಟಿದೆ. ನಮ್ಮ ದೇಶವೂ ಈ ದಿಶೆಯಲ್ಲಿ ಹಿಂದುಳಿದಿಲ್ಲ. ಮುಂಬೈನ ಭಾಭಾ ಅಣುವಿಜ್ಞಾನ ಕೇಂದ್ರ, ಪೂನಾದ ರಾಷ್ಟ್ರೀಯ ರಾಸಾಯನಿಕ ಪ್ರಯೋಗಾಲಯ, ಅನೇಕ ಕೃಷಿ ವಿದ್ಯಾಲಯಗಳು, ಬೆಂಗಳೂರಿನ ತಾತಾ ವಿಜ್ಞಾನ ಮಂದಿರ ಇತ್ಯಾದಿ ಸಂಸ್ಥೆಗಳಲ್ಲಿ ಈ ವಿಧಾನಗಳನ್ನು ಸಮರ್ಥರೀತಿಯಲ್ಲಿ ಬಳಸುತ್ತಿದ್ದಾರೆ.

## ರೋಗನಿವಾರಕ ಸಸ್ಯಗಳು

ಬಹುಶಃ ಮನುಷ್ಯ ಪೀಳಿಗೆ ಪ್ರಾರಂಭವಾದಂದಿನಿಂದಲೂ ಮಾನವನಿಗೂ ಸಸ್ಯ ಗಳಿಗೂ ಅತ್ಯಂತ ನಿಕಟವಾದ ಸಂಬಂಧವಿದ್ದೇ ಇದೆ. ಅನಾದಿ ಕಾಲದಿಂದ ಗೆಡ್ಡೆ ಗೆಣಸುಗಳನ್ನೇ ಆಹಾರವಾಗಿ ಉಪಯೋಗಿಸುತ್ತಿದ್ದ ಮನುಷ್ಯ ಜೊತೆಗೆ ಅನೇಕ ದೇಹ ವಿಕಾರಗಳಿಗೆ ಸಸ್ಯಗಳಿಂದಲೇ ಔಷಧಗಳನ್ನು ಕಂಡುಕೊಂಡು ರೋಗಗಳನ್ನು ನಿವಾರಿಸಿಕೊಳ್ಳುತ್ತಿದ್ದ. ನಮ್ಮ ವೇದಗ್ರಂಥಗಳಾದ ಋಗ್ವೇದ, ಅಥರ್ವಣ ವೇದ ಗಳಲ್ಲಿ ಅನೇಕ ಔಷಧ ಸಸ್ಯಗಳ ಹೆಸರುಗಳ ಬಳಕೆಯಲ್ಲಿದ್ದುದು ಕಂಡು ಬರುತ್ತದೆ. ಇದು ಕ್ರಿ. ಪೂ. 3500 ರಿಂದ 1800 ರ ಕಾಲ. ಇದಾದ ಸಾವಿರಾರು ವರ್ಷಗಳ ನಂತರ ಪಂಡಿತರುಗಳಾದ ಚರಕ-ಶುಶ್ರುತರು 'ಚರಕ ಸಂಹಿತಾ' ಹಾಗೂ 'ಶುಶ್ರುತ ಸಂಹಿತ ಎಂಬೆರಡು ವೈದ್ಯ ಗ್ರಂಥಗಳನ್ನು ರಚಿಸಿ ಅತ್ಯಮೂಲ್ಯವಾದ ಸುಮಾರು 700 ಸಸ್ಯಗಳನ್ನು ವಿವರಿಸಿದ್ದಾರೆ. ಇಂದಿಗೆ ಔಷಧಯುಕ್ತ ಸಾವಿರಾರು ಸಸ್ಯಗಳು ನಮಗೆ ಉಪಲಬ್ಧವಾಗಿವೆ.

### ೧) 'ಸರ್ಪಗಂಧಿ' ಅಥವಾ Rowolfia serpentina

ನಮ್ಮ ಆಯುರ್ವೇದ ಚರಿತ್ರೆಯಲ್ಲಿ 4000 ವರ್ಷಗಳಷ್ಟು ಹಳೆಯದಾದ ಸುಪ್ರಸಿದ್ಧ ಔಷಧ ಗಿಡ. ಇದರ ಬೇರಿನಲ್ಲಿರುವ 'ಸರ್ಪೆಂಟೈನ್' ಮತ್ತು 'ರಾವು ಲ್ಫಿನ್' ಎಂಬ ವಿಷವಸ್ತುಗಳು ಅತಿರಕ್ತದ ಒತ್ತಡವನ್ನು ನಿವಾರಿಸಬಲ್ಲವು. ಮಾನ ಸಿಕ ದುರ್ಬಲತೆಗಳನ್ನು ಹೋಗಲಾಡಿಸುವುದಲ್ಲದೆ ಅತಿ ಆಮ್ಲದಿಂದ ಉಂಟಾಗುವ ಕರುಳು ಹಣ್ಣುಗಳನ್ನು ಉಪಶಮನಗೊಳಿಸುತ್ತವೆ. ಸುಮಾರು 15,000 ಕ್ವಿಂಟಾಲ್ ನಷ್ಟು ಔಷಧ ನಮ್ಮ ದೇಶದಲ್ಲಿ ಖರ್ಚಾಗುತ್ತದೆ.

೨) 'ಅಳಲೇಕಾಯಿ' ಮರ ಅಥವಾ Terminalia chebula

ಇದು ಎಷ್ಟು ಪ್ರಸಿದ್ಧವೆಂದರೆ ಸಾಮಾನ್ಯವಾಗಿ ಆಯುರ್ವೇದ ಪಂಡಿತರನ್ನು ನಾವು 'ಅಳಲೇಕಾಯಿ' ಪಂಡಿತ ಎಂದು ಕರೆಯುವುದುಂಟು. ಈ ಮಾತಿನಲ್ಲಿ ಸತ್ಯಾಂಶವಿದೆ. ಅಳಲೆಕಾಯಿಯ ಕಷಾಯವನ್ನು 'ಶಕ್ತಿವರ್ಧಕ' ಅಥವಾ ಟಾನಿಕ್ ನ್ನಾಗಿ ಉಪಯೋಗಿಸುತ್ತಾರೆ. ಇದಕ್ಕೆ ರಕ್ತ ಶುದ್ಧಿ ಮಾಡುವ ಶಕ್ತಿ ಇದ್ದು, ಅಜೀರ್ಣ, ವಾಯು ಮುಂತಾದ ವಿಕಾರಗಳಿಗೆ ಸಿದ್ಧೌಷಧ. ಮೆದುಳನ್ನು ಚೇತನ ಗೊಳಿಸುವುದಲ್ಲದೆ ದೇಹದ ಎಲ್ಲ ಜೀವರಸಾಯನ ಕಾರ್ಯಗಳನ್ನು ಸುಸ್ಥಿತಿಯಲ್ಲಿಡು ವಂತಹ ಶಕ್ತಿ ಇದಕ್ಕಿದೆ.

• ತಿಲಪುಷ್ಪ ಗಿಡ' ಅಥವಾ Digitalis qurpura

ಗಿರಿಧಾಮಗಳಲ್ಲಿ ವಿಶೇಷವಾಗಿ ಬೆಳೆಯುವ ಗಿಡ ಇದರಲ್ಲಿ 'ಡಿಜಿಟ್ಯಾಲಿನ್' ಎಂಬ ಮದ್ದು ಹೃದ್ರೋಗಗಳಿಗೆ ಒಳ್ಳೆಯದು. ಸಾಮಾನ್ಯವಾಗಿ ದೇಹದ ಮಾಂಸ ಖಂಡಗಳನ್ನು ಚೇತನಗೊಳಿಸಿ ರಕ್ತ ಸಂಚಾರವನ್ನು ಸರಳಗೊಳಿಸಿ ಹೃದಯದ ಕೆಲ ಸವನ್ನು ಹಗುರಗೊಳಿಸುವ ಔಷಧ.

೪) ಅಶ್ವಗಂಧಿ ಗಿಡ ಅಥವಾ Withania sommifera

ಇದರ ಬೇರುಗಳನ್ನು ಒಣಗಿಸಿ ಪುಡಿಮಾಡಿ ಔಷಧರೂಪದಲ್ಲಿ ಸೇವಿಸಲಾಗು ತ್ತದೆ. ಅಶಕ್ತತೆ ಸಂದಿತವಾತಗಳನ್ನು ನಿವಾರಿಸುವುದಲ್ಲದೆ ವಿಷಕ್ರಿಮಿಗಳನ್ನು ನಾಶ ಮಾಡುವ ಶಕ್ತಿ ಇದಕ್ಕಿದೆ.

೫) ನೆಲ್ಲಿಕಾಯಿ ಅಥವಾ Phyllavthur emblica

ಎಲ್ಲರಿಗೂ ಚಿರಪರಿಚಿತವಾಗಿರುವ ಗಿಡ. ಪ್ರಸಿದ್ಧವಾದ 'ತ್ರಿಫಾಲ' ಎಂಬ ಔಷಧದಲ್ಲಿ ಇವನ್ನು ವಿಶೇಷವಾಗಿ ಉಪಯೋಗಿಸುತ್ತಾರೆ. ಹಸಿ ಅಥವಾ ಒಣಗಿದ ನೆಲ್ಲಿಕಾಯಿಗಳು ಪಿತ್ತಕೋಶದ ವಿಕಾರ, ಮೂಲವ್ಯಾಧಿ, ಹೊಟ್ಟೆನೋವುಗಳಿಗೆ ಉತ್ತಮ ಔಷಧ. ನೀರಿನಲ್ಲಿ ನೆನೆಹಾಕಿ ಹುಳಿಬರುವಂತೆಮಾಡಿ ತೆಗೆದ ದ್ರವವು ಅಜೀರ್ಣ, ನಿಶಕ್ತಿ, ಜಾಂಡೀಸ್ ಹಾಗು ಹೃದಯ ವಿಕಾರಗಳಿಗೆ ಉಪಶಮನಕಾರಿ. 'ಸಿ' ಅನ್ನಾಂಗ ಯಥೇಚ್ಛವಾಗಿರುವ ಈ ಕಾಯಿಗಳು ಸ್ಕರ್ವಿ ರೋಗವನ್ನು ವಾಸಿಮಾಡುವ ಸಿದ್ಧೌಷಧ.

೬) 'ಬೆಲಡೊನ್ನದ ಗಿಡ' ಅಥವಾ Atropa belladonna

ಗಿಡದ ಬೇರು ಮತ್ತು ಒಣಗಿದ ಎಲೆಗಳನ್ನು ಕಡಿಮೆ ಪ್ರಮಾಣದಲ್ಲಿ ಉಪ ಯೋಗಿಸಿದಾಗ ಹೊಟ್ಟೆ ಮುರಿತ ಮತ್ತು ಅತಿಆಮ್ಲ ಉತ್ಪತ್ತಿಯನ್ನು ತಡೆಗಟ್ಟುತ್ತದೆ.

( 33 ನೇ ಪುಟ ನೋಡಿ )



# ಅಜ್ಞಾತ ಶಿವಶರಣ ಶ್ರೇಷ್ಠ ವಚನಕಾರ ಗಜೇಶ ಮಸಣಯ್ಯ

—ಪ್ರೊ॥ ಎಸ್. ಎಸ್. ಭೂಸರೆಡ್ಡಿ

ಮಾನವಕುಲ ಪಾವನ ಮಾಡಿದ ಜಗತ್ತಿನ ಮಹಾಪುರುಷರ ಸಾಲಿನಲ್ಲಿ ಸೇರತಕ್ಕವರು ಭಕ್ತಿ ಭಂಡಾರಿ ಅಣ್ಣ ಬಸವಣ್ಣನವರು. ಕಲ್ಯಾಣಕಾಂತಿಯ ಕಾರಣ ಪುರುಷರು, ಸಮತಾವಾದದ ನಿತಾಂತ ಉತ್ಕಟ ಪುರಸ್ಕರ್ತರು, ಹೃದಯ ಪರಿವರ್ತನೆ ಯಮೂಲಕ ಆತ್ಮಕಲ್ಯಾಣದೊಂದಿಗೆ ಲೋಕಕಲ್ಯಾಣ ಸಾಧಿಸಿದ ಮಹಾಮಹಿಮರು. ಏಕದೇವೋಪಾಸನೆಯ ಮೂಲಕ ಮಾನವ ಕುಲ ಒಂದು ಎಂದು ಬೋಧಿಸಿದರು, ಆಚರಿಸಿದರು. ಲಿಂಗತತ್ವದ ಮೂಲಕ ಜಗತ್ತಿನ ಜನತೆಯ ಅಜ್ಞಾನವನ್ನು ಹೊಡೆ ದೋಡಿಸಿ ಸುಜ್ಞಾನದ ಪ್ರಭೆ ಬೆಳಗಿದವರು. ಈ ಮಹಿಮಾನ್ವಿತರ ಸಮಕಾಲೀನ ರಾಗಿ ಬಾಳಿ ಬೆಳಗಿದ ಅಸಂಖ್ಯಾತ ಅಪ್ರತಿಮ ಶರಣ ಶರಣೆಯರ ಜೀವನ ಸಿದ್ಧಾಂತ ಇನ್ನೂ ಅಜ್ಞಾತ ಸ್ಥಿತಿಯಲ್ಲಿಯೇ ಉಳಿದಿದೆಯೆಂದು ಹೇಳಿದರೆ ಸತ್ಯವನ್ನೇ ಹೇಳಿದಂತೆ ಎಂದು ಭಾವಿಸಬೇಕಾಗಿದೆ. ಇಂಥವರ ಸಾಲಿನಲ್ಲಿ ಸೇರತಕ್ಕವರು ಗಣೇಶ ಮಸಣಯ್ಯ ನವರು. 'ಲಿಂಗಮಧ್ಯೆ ಜಗತ್ ಸರ್ವಂ' ಎಂಬ ತತ್ವದಂತೆ ಲಿಂಗಾಂಗ ಸಾಮರಸ್ಯದ ಸವಿಸುಖವನ್ನು ಮನೋಜ್ಞವಾಗಿ ಮನಮುಟ್ಟುವಂತೆ ಹೇಳಿದ ಅಪರೂಪದ ವಚನ ಕಾರ. ಲೌಕಿಕ ದೃಷ್ಟಾಂತ, ರೂಪಕ, ಉಪಮೆಗಳಿಂದ ಲಿಂಗಪೂಜೆಯ ಮಹತ್ವ ವನ್ನು ಸರಳವಾಗಿ ಸುಲಭವಾಗಿ ಸುಲಲಿತವಾಗಿ ತಿಳಿಸಿದ ಗಜೇಶ ಮಸಣಯ್ಯನವರ ವಚನಗಳ ಕಡೆಗೆ ನಮ್ಮವರ ಗಮನ ಹರಿಯದಿರುವುದು ಸೋಜಿಗದ ಮಾತು. ಆಶ್ಚರ್ಯದ ಸಂಗತಿ.

ಗಜೇಶ ಮಸಣಯ್ಯ ಐತಿಹಾಸಿಕ ಪ್ರಸಿದ್ಧ ಶರಣ, ಅಕ್ಕಲಕೋಟೆಗೆ ಸಮೀಪ ವಿರುವ ಕರಜಗಿ ಅವನ ಜನ್ಮ ಭೂಮಿ. ಅಣ್ಣ ಬಸವಣ್ಣನವರ ಸಮಕಾಲೀನ ಶ್ರೇಷ್ಠ ವಚನಕಾರ. 'ಶರಣ ಸತಿ ಲಿಂಗ ಪತಿ' ಭಾವದ ಆತನ ವಚನಗಳು ವಚನ ಸಾಹಿತ್ಯ ಪ್ರಪಂಚದಲ್ಲಿ ಉನ್ನತ ಸ್ಥಾನ ಪಡೆಯಲರ್ಹವಾಗಿವೆ. ಎಂಬುದನ್ನು ಮರೆ ಯಲಾಗದು, ಮರೆಯಬಾರದು.

ಪಾಲ್ಕುರಿಕೆ ಸೋಮನಾಥನ ಗಣ ಸಹಸ್ರ ನಾಮಾವಳಿ. ಪಂಡಿತಾರಾಧ್ಯ ಚರಿತ್ರೆ, ಬಸವಪುರಾಣ, ಪದ್ಮರಾಜ ಪುರಾಣ, ವೀರಶೈವಾಮೃತ ಮಹಾಪುರಾಣ, ಗುರುರಾಜ ಚರಿತ್ರೆ, ಅಭವ ಸ್ತೋತ್ರದ ಕಂದ, ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ ಮೊದಲಾದ ಕನ್ನಡ ಕಾವ್ಯಗಳಲ್ಲಿ ಆತನ ಜೀವನ ಚರಿತ್ರ ಸುಳಿದೆ

ಗೆದು ಸೂಸಿ ನಿಂತಿದೆ. ಲಿಂಗಪೂಜೆ, ಜಂಗಮ ದಾಸೋಹ ಅವನ ನಿತ್ಯ ಕಾಯಕ ಲಿಂಗಪೂಜಾ ವಿಧಾನವಂತೂ ವಿಶಿಷ್ಟವಾದುದು. ಏಕ ಚಿತ್ತದಿಂದ ಲಿಂಗಪೂಜೆಯಲ್ಲಿ ನಿರತನಾದಾಗ ಅವನಿಗೆ ಬಾಹ್ಯ ಜಗತ್ತಿನ ಪರಿಜ್ಞಾನವೇ ಹಾರಿಹೋಗುತ್ತಿತ್ತು. ಅಡವಿಯ ಪ್ರಾಣಿಗಳು, ಕ್ರೂರಮೃಗಗಳು ಈತನ ಪೂಜಾ ವೈಭವದಲ್ಲಿ ಸಹಕರಿಸುತ್ತಿದ್ದವಂತೆ. ಭೂತ ಬೇತಾಳಗಳು ಕಾಲು ಕಿತ್ತು ಓಡಿಹೋಗುತ್ತಿದ್ದುವಂತೆ. ಗಾಳಿ, ಮಳೆ, ಛಳಿ, ಬೆಂಕಿ, ಸಿಡಿಲು ಮಿಂಚು ಬಂದರೂ ಲಿಂಗಪೂಜೆಗೆ ಭಗ್ನವಾಗುತ್ತಿದ್ದಿಲ್ಲ. ಅವನ ಛಲ, ಆತ್ಮಬಲ ಇಂದಿಗೂ ಅನುಕರಣೀಯ ಆದರ್ಶ ಗುಣಗಳೆಂದೇ ಹೇಳಬೇಕಾಗಿದೆ. ಇವನು ಲಿಂಗಪೂಜೆಗೆ ಕುಳಿತಾಗ ನದಿಯೇ ಇಬ್ಭಾಗವಾಗಿ ಹರಿದು ಹೋಯಿತಂತೆ. ಲಿಂಗ ಭಕ್ತರಿಗೆ 'ಶರದಿ' ಅಂಜುವದು ಎಂಬ ಮಾತು ನಿತ್ಯ ಸತ್ಯ. ಲಿಂಗತತ್ವದ ಅಪ್ರತಿಮ ಪ್ರತಿಪಾದಕನಾದ ಗಜೇಶ ಮಸಣಯ್ಯನ ವಚನಗಳಂತೂ ಹೃದಯಸ್ಪರ್ಶಿಯಾಗಿದೆ.

## ವಚನ ವಿವೇಚನೆ

ಇತ್ತೀಚಿನ ಸಂಶೋಧನೆಯಿಂದ ಆತನ 66 ವಚನಗಳು ಬೆಳಕಿಗೆ ಬಂದಿವೆ. ಇನ್ನೂ ಸಂಶೋಧನೆ ಮಾಡಿದರೆ ಹೆಚ್ಚಿನ ವಚನಗಳು ದೊರೆಯುವ ಸಂಭವ ಇಲ್ಲದಿಲ್ಲ. ಆತನ ವಚನಗಳ ಅಂಕಿತ 'ಮಹಾಲಿಂಗ ಗಜೇಶ್ವರ' ಲಿಂಗವನ್ನು ಪೂಜಿಸಿ ಲಿಂಗವೇ ಆಗಬೇಕೆಂಬ ಭಾವ ತುಂಬಿ ನಿಂತಿವೆ, ಈತನ ವಚನಗಳು ಲಿಂಗವಿಕಳಾವಸ್ಥೆಯ ಪರಿಣಾಮವನ್ನು ಪರಿಣಾಮಕಾರಿಯಾಗಿ ಪ್ರಭಾವ ಪೂರ್ಣವಾಗಿ ಬಿತ್ತರಿಸಿದ್ದಾನೆ. 'ಅವನ ಕಿಂಕರಭಾವಕ್ಕೆ ಸಾಕ್ಷಿಯಾಗಿ ನಿಂತ ಈ ವಚನ ನೋಡಿ :

ಪರಮ ಪದವಿಯ ನಿಮ್ಮ ಕೊರಳಲ್ಲಿ ಕಟ್ಟಿಕೊಳ್ಳಿ
ಪರಮ ಪದವಿಯ ನಿಮ್ಮ ತಲೆಯಲ್ಲಿ ಹೊತ್ತುಕೊಳ್ಳಿ.
ಎನಗೆ ನಿಮ್ಮ ತೊತ್ತುತನವೇ ಸಾಕು,
ಮಹಾಲಿಂಗ ಗಜೇಶ್ವರ ದೇವಯ್ಯ
ನಿಮ್ಮ ಎದೆಯಲ್ಲಿರಿಸಿಕೊಳ್ಳಿ ,,

'ಲಿಂಗದೇಹಿ ಸದಾ ಶುಚಿ' ಎಂಬಂತೆ ಲಿಂಗದೇವನನ್ನು ಎಂದೆಂದಿಗೂ ಅಗಲಬಾರದು. ಅಗಲಕೂಡದು ಆತನೇ ಸರ್ವಸ್ವ. ಕೋಟಿ ಹಣ ಬಂದು ಬಿದ್ದರೂ ಈ ಲಿಂಗದೇವನಿಗೆ ಸಮಾನವಾದುದು ಇನ್ನೊಂದಿಲ್ಲ ಎಂಬ ಭಾವವನ್ನು ಮೇಲಣ ವಚನದಲ್ಲಿ ಕಾಣುತ್ತೇವೆ.

ಲಿಂಗಾಂಗಸಾಮರಸ್ಯದ ಸವಿಸುಖವನ್ನು ಎತ್ತಿ ಹೇಳುವ ಈ ವಚನವನ್ನು ನೋಡಿ





"ಆತನ ಬೆರಸಿದ ಕೂಟವನೇನೆಂದು ಹೇಳುವೆನವ್ವಾ,
ಕೇಳಲೂ ಬಾರದು ಹೇಳಲೂ ಬಾರದು.
ಏನು ಹೇಳುವೆನವ್ವಾ ಶಿಖಿಕರ್ಪುರವ ಬೆರಸಿದಂತೆ
ಮಹಾಲಿಂಗ ಗಜೇಶ್ವರನ ಕೂಡಿದ ಕೂಟವ ಹೇಳಲು ಬಾರದವ್ವಾ–'

ಇನ್ನೊಂದು ಮನೋಜ್ಞವಾದ ಮಾರ್ಮಿಕವಾದ ವಚನ :

ಮಾಗಿಯ ಹುಲ್ಲಿನ ಸೊಂಕಿನಂತೆ ತನು ಪುಳಕಿತಳಾಗಿರ್ದಳವ್ವೆ.
ನುಡಿ ತೊದಳು ಅವನ ಒಲವೇ ಆಧಾರವಾಗಿರ್ದಳವ್ವೆ.
ಬಿಳಿಯ ತುಂಬಿ ಕುಂಕುಮದ ರಜದಲ್ಲಿ ಬಂದುಂಡಂತೆ.
ಮಹಾಲಿಂಗ ಗಜೇಶ್ವರನಲ್ಲಿ ತನ್ನಲ್ಲಿ ತಾನೆ ರತಿಯಾಗಿರ್ದಳವ್ವ.

ಲಿಂಗಾಂಗಸಾಮರಸ್ಯದ ಸವಿಸುಖದ ಚರಮ ಸೀಮೆಯಿದು. ಮಾಂಸ ಪಿಂಡವಳಿದು ಮಂತ್ರಪಿಂಡವಾದ ಬಗೆಯಿದು. ಅಂಗಗಳೆಲ್ಲವೂ ಲಿಂಗಮಯವಾದ ಪರಿಯಿದು. ಜೀವಾತ್ಮ ಪರಮಾತ್ಮನಾದ ರೀತಿಯಿಂದ ಇದಕ್ಕಿಂತಲೂ ಹೆಚ್ಚು ಕಾವ್ಯಮಯವಾಗಿ ಹೇಳಲು ಸಾಧ್ಯವೇ ಇಲ್ಲ. ಮಾನವನು ಮಹಾ ಮಾನವನಾಗಿ ದೇವಮಾನವನಾಗಬೇಕಾದರೆ ಲಿಂಗತತ್ವವನ್ನು ಅಳವಡಿಸಿಕೊಂಡಾಗಲೇ ಸಾಧ್ಯವಾಗುವುದು. ಇದು ಅತ್ಯಂತಸರಳವಾದ ಸುಲಭವಾದ ಮಾರ್ಗ. ಅಂತೆಯೇ ಹಠಯೋಗ, ಲಯಯೋಗ, ರಾಜಯೋಗ, ಮಂತ್ರಯೋಗ ಮೊದಲಾದವುಗಳಿಗಿಂತಲೂ 'ಶಿವಯೋಗ' ಶ್ರೇಷ್ಠವಾದುದು. ಶಿವಯೋಗಸಿದ್ಧಿಗೆ ಲಿಂಗಾಂಗಸಾಮರಸ್ಯವು ಅತ್ಯಂತ ಅವಶ್ಯಕ. ಅಥಣಿ ಮುರುಘೇಂದ್ರ ಮಹಾಶಿವಯೋಗಿಗಳು, ಇಲಕಲ್ಲ ವಿಜಯ ಮಹಾಂತ ಶಿವಯೋಗಿಗಳು ಮೊದಲಾದವರು 'ಶಿವಯೋಗ' ದ ಬಲದಿಂದಲೇ ಲೋಕವಿಖ್ಯಾತರಾದರು. ವೀರಶೈವ ಧರ್ಮವು ಜನತಾಧರ್ಮ, ಹೃದಯ ಪ್ರಧಾನ ಧರ್ಮ, ಆಚಾರ ಪ್ರಧಾನವಾದ ಧರ್ಮವೆಂಬುದನ್ನು, ತಮ್ಮ ಆಚಾರ ವಿಚಾರಗಳಿಂದಲೇ ತಿಳಿಸಿಕೊಟ್ಟರು. ಈ ಭಾವನೆಯನ್ನು ಗಜೇಶ ಮಸಣಯ್ಯ ಈ ವಚನದಲ್ಲಿ ಅತ್ಯಂತ ಮನೋಹರವಾಗಿ ನಿವೇದಿಸಿದ್ದಾನೆ. ತನ್ನ ಅನುಭವದ ಅಮೃತವನ್ನು ಉಣಪಡಿಸಿದ್ದಾನೆ.

ಲಿಂಗತತ್ವದ ವೈಚಾರಿಕ ವಿವೇಚನೆಯಲ್ಲಿ ಪಳಗಿದ ಶ್ರೇಷ್ಠ ಶಿವಶರಣ ಗಜೇಶ ಮಸಣಯ್ಯ ಇಂದಿನ ಆಡಂಬರದ ಡೊಂಬರ ಆಟವನ್ನಾಡುವ, ಮಾತಿನಲ್ಲಿ ಮಾತಿಲ್ಲವೆ ಅಸ್ಖಲಿತವಾಗಿ ಮನಬಂದಂತೆ ಮಾತನಾಡುವವರಿಗೆ ಕೊಟ್ಟ ಚಾಟಿಯ ಏಟಿದು. ದಿನ ಬೆಳಗಾದರೆ ಇಂದು ವೇದಿಕೆಯಲ್ಲಿ ವೇಷಡಂಬಕರ ತಂಡವನ್ನೇ ಕಾಣುತ್ತೇವೆ. ಹಣಕ್ಕಾಗಿ ಸಿಕ್ಕ ಸಿಕ್ಕಂತೆ ಮಾತನಾಡುವವರನ್ನು ನೋಡುತ್ತೇವೆ. ಆಚಾರ ವಿಚಾರಗಳ ನಡೆನುಡಿಗಳ ಸಾಮರಸ್ಯವಿಲ್ಲದಿದ್ದರೆ ಅವು ಯಾವ ಪ್ರಯೋಜನಕ್ಕೆ ಬಾರವು.

ಅಂತೆಯೇ ಈ ಎಚ್ಚರಿಕೆ ಘಂಟೆಯನ್ನು ಬಾರಿಸಿದ್ದಾನೆ ಗಜೇಶ ಮ ಸ ಣ ಯ್ಯ. ಇಂದಿಗೂ ಇವನ ಸಂದೇಶ ಪರಿಪಾಲಿಸುವಂತಿದೆ.

‘ದೇವರ ನೆನೆದು ಮುಕ್ತರಾದೆವೆಂಬ
ಯುಕ್ತಿಶೂನ್ಯರ ಮಾತ ಹೇಳಲಾಗದು ;
ಅದೇನು ಕರಣವೆಂದಡೆ ;
ದೇವರ ನೆನೆವವರಿಗೆ ದೇವರುಂಟೆ ?
ದೂರದಲ್ಲಿದ್ದವರ ನೆನೆವರಲ್ಲದೆ
ಸಮೀಪದಲ್ಲಿದ್ದವರನಾರೂ ನೆನೆವರಿಲ್ಲ.
ಇದನರಿದು ನಿನ್ನೊಳಗಡಗಿ ನಾನಿನ್ನ ನೆನೆಯಲಿಲ್ಲ.
ನನ್ನೊಳಗಡಗಿ ನೀನೆನಗೆ ಮುಕ್ತಿಯನೀಯಲಿಲ್ಲ.
ಇದು ಕಾರಣ ನಾನೀನೆನಲಿಲ್ಲ ಮಹಾಲಿಂಗ ಗಜೇಶ್ವರ.

ಇಂದು ನಮ್ಮ ಬಾಳು ಅಗಸ ನೀರಡಿಸಿದಂತಾಗಿದೆ, ಬಗಲಲ್ಲಿ ಕೂಸು ಇಟ್ಟು ಕೊಂಡು ಓಣಿತುಂಬ ದೆಸೆಬಾಯಿ ಬಿಟ್ಟು ಹುಡುಕುವಂತಾಗಿದೆ. ಮುಗಿಲ ಮರೆಯ ಮಿಂಚಿನಂತೆ, ಕಲ್ಲಿನಲ್ಲಿಯ ಹೇಮದಂತೆ, ತನ್ನೊಳಗಿರುವ ಆತ್ಮಶಕ್ತಿಯನ್ನು ಜಾಗೃತ ಗೊಳಿಸದೆ ಸಿಕ್ಕ ಸಿಕ್ಕ ದೇವರನ್ನು ನೆನೆಯುವುದು ವ್ಯರ್ಥವೆಂಬ ಹದವಾದ ಮಾತು ಇಲ್ಲಿ ನಿನದಿಸಿದೆ.

ಲಿಂಗದ ಒಲವು ಚೆಲವು ಗೆಲವು ಬಲವು ಇಂಬುಗೊಂಡಾಗಲೇ ದೇವತ್ವದ ಸಾಕ್ಷಾತ್ಕಾರ ; ಆ ಒಲವಿಗಾಗಿ ಹಲುಬಿ ಹಂಬಲಿಸುವ ವಚನವಿದು ;

"ಮಾಘ ಮಾಸದ ನವಿಲಿನಂತಾದೆ ನೋಡವ್ವಾ
ಇರುಳು ತೊಳಲುವ ಜಕ್ಕವಕ್ಕಿಯಂತೆ
ಹಲವ ಹಲಬುತಿರ್ದೆ ನೋಡವ್ವಾ
ಮಾಗಿಯ ಕೋಗಿಲೆಯಂತೆ ಮಾಗಿಯಾಗಿರ್ದೆ ನೋಡವ್ವಾ
ಮಹಾಲಿಂಗ ಗಜೇಶ್ವರನ ಅನುಭಾವಸಂಬಂಧಿಗಳ ಬರವು
ಎನ್ನ ಪ್ರಾಣದ ಬರವು ನೋಡವ್ವಾ"

ಲಿಂಗದ ವಿರಹತಾಪವನ್ನು ಬಣ್ಣಿಸುವ ಮೇಲಣವಚನ ಮೇಲಿಂದ ಮೇಲೆ ಮನನ ಮಾಡುವಂತಿದೆ. ಜೀವನದ ಕೊನೆಯ ಉಸಿರು ಇರುವವರೆಗೂ ಲಿಂಗದೇವ ನನ್ನು ನೆನೆಯುವುದೇ ನಿಜ ಭಕ್ತನ ಗುರಿ, ನಿರಿ ಆತನಲ್ಲಿ ಒಂದಾಗಿ ಬೆರೆತಾಗಲೇ ದೈವತ್ವ ಇಳಿದು ಬರುವುದು. ಈ ಬಗೆಯ ವಿಚಾರ ಈ ವಚನಗಳನ್ನು ಓದಿದರೆ ಮನ ಗಾಣುತ್ತೇವೆ.



ಗಣೇಶ ಮಸಣಯ್ಯ ಶ್ರೇಷ್ಠ ವಚನಕಾರ, ಅನುಪಮ ಅನುಭಾವಿ. ಲಿಂಗಾಂಗ ಸಾಮರಸ್ಯದ ವಿಚಾರಗಳನ್ನು ತರ್ಕಬದ್ಧವಾಗಿ ತಿಳಿಸುವ ಅವನ ವಚನಗಳ ಅಭ್ಯಾಸ ಅಗತ್ಯವಾಗಿದೆ.

ಲೌಕಿಕವಾಗಿ ಸತಿಯು ಅಗಲಿದ ತನ್ನ ಪತಿಗಾಗಿ ವಿರಹಪಡುವಂತೆ ಮಸಣಯ್ಯ 'ಶರಣ ಸತಿಲಿಂಗಪತಿ' ಮೃದುಮಧುರ ಭಾವನೆಗಳನ್ನು ಲಿಂಗದ ವಿರಹತಾಪದ ವರ್ಣನೆ ಯನ್ನು ನೀಡುವಲ್ಲಿ ಅವನ ಅನುಭಾವ ವ್ಯಕ್ತಗೊಂಡಿದೆ. ಲಿಂಗ ವಿರಹಿಯ ಅನುತಾಪ ಕಳವಳ, ಕೊರಗು, ವ್ಯಥೆ, ಹುಸಿಮುನಿಸು ಈತನ ವಚನಗಳಲ್ಲಿ ಮನೋಜ್ಞವಾಗಿ ಮೂಡಿಬಂದಂತೆ ಲಿಂಗದೊಡನೆ ಬೆರೆತಾಗ ಆಗುವ ಆನಂದ, ಅನುರಾಗ, ಪುಳಕ, ನಡುಕ, ರೋಮಾಂಚನ, ಪರವಶತೆ, ನಿಬ್ಬೆರಗು ಅತ್ಯಂತ ಹೃದಯಂಗಮವಾಗಿ ವರ್ಣಿತವಾಗಿದೆ. ವೀರಶೈವ ಧರ್ಮತತ್ತ್ವ ಈ ವಚನಗಳಲ್ಲಿ ಯಥಾರ್ಥವಾಗಿ ಪ್ರತಿ ಬಿಂಬಿತಗೊಂಡಿದೆ. ಲಿಂಗವನ್ನು ಪೂಜಿಸಿ ಲಿಂಗವೇ ಆಗುವ ಉದಾತ್ತ ಮನೋ ಧರ್ಮ ಈ ವಚನಗಳ ಗುರಿ.

'ನಂಬು ನಂಬಲೇ ಮನವೇ ನಂಬಿಗೆಯೇ ಕಾರಣವು ಶಾಂಭನೊಲಿವುದಕೆ' ಎಂಬಂತೆ ಚಂಚಲವಾದ ಮಂಗನಂತಹ ಮನಸ್ಸನ್ನು ದೃಢಚಿತ್ತದಿಂದ ಏಕಾಗ್ರಗೊಳಿಸಿ ಲಿಂಗದಲ್ಲಿ ಕೇಂದ್ರೀಕರಿಸಿದರೆ ಲಿಂಗವೇ ತನ್ನ ಒಲಿದು ನಲಿದು ಬರುವುದರಲ್ಲಿ ಸಂದೇಹ ವಿಲ್ಲ. ಆದುದರಿಂದ ಆತನ ಬರುವಿಕೆಯನ್ನು ಕಾತುರದಿಂದ ಕುತೂಹಲದಿಂದ ಕಾಯ ಬೇಕು. ಈ ವಿಚಾರವನ್ನು ಹೇಳುವ ಈ ವಚನವನ್ನು ಓದಿ.

"ಒಳಗೆ ಶೋಧಿಸಿ ಹೊರಗಧವಳಿಸಿ
ಭಾವದಿಂದ ಗುಡಿ ತೋರಣವ ಕಟ್ಟಿ
ಲಿಂಗ ಬಾರಯ್ಯ, ಎನ್ನ ದೇವ ಬಾರಯ್ಯ
ಎನ್ನಂತರಂಗದ ಪರಂಜ್ಯೋತಿ ಬಾರಯ್ಯ
ನಿಮ್ಮ ನಾನಿದಿರುಗೊಂಬೆ ಬಾರಯ್ಯ
ಎನ್ನ ಮಹಾಲಿಂಗ ಗಜೇಶ್ವರಾ ನೀ ಬಾರಯ್ಯ"

ಎಂದು ಲಿಂಗದೇವನನ್ನು ಕರೆಯುವ ಸನ್ನಿವೇಶ ರೋಮಾಂಚಕಾರಿಯಾಗಿದೆ. ಅಂತರಂಗ ಬಹಿರಂಗ ಶುದ್ಧನಾದವನಿಗೆ ಲಿಂಗದೇವನು ಸುಲಭವಾಗಿ ಒಲಿಯುವನು : ಮನಕ್ಕೆ ಕವಿದ ಕತ್ತಲೆ ಕರಗಿಹೋಗುತ್ತದೆ. ಅಜ್ಞಾನವಳಿದು ಸುಜ್ಞಾನ ಪ್ರಭೆ ಬೆಳಗುತ್ತದೆ. ಲಿಂಗದೇವನಲ್ಲಿ ಒಂದಾಗಿ ಬೆರೆತಾಗ ಆಗುವ ಸವಿ ಸುಖದ ಸೊಗಿನ ಈ ವಚನ :

"ಬಾಲಕ ಹಾಲ ಸವಿದಂತೆ ಮರುಳನ ಮನದ ಹರುಷದಂತೆ
ಮೂಗ ಕಂಡ ಕನಸಿನಂತೆ, ವೈಯರಿಯದ ನೆಳಲಿನಂತೆ

ಬಂಜೆಯು ಮನದ ನೇಹದಂತೆ
ಮಹಾಲಿಂಗ ಗಜೇಶ್ವರನೊಲವು ನೋಡವ್ವ"

ಇದೊಂದು ಅವರ್ಣನೀಯವಾದ ಅನುಪಮ ವಚನವೇ ಸರಿ. ಭಾಷೆ ಶಕ್ತಿಪೂರ್ಣವಾಗಿದೆ, ಸೂತ್ರಪ್ರಾಯವಾದ ಮಾತುಗಳಿವು. ಲಿಂಗಪತಿಯಲ್ಲಿ ಶರಣಸತಿಯ ಐಕ್ಯವು.

'ಆ ಲಿ ಕ ಲ್ಲ ಪು ತ್ಥ ಳಿ ಅಪ್ಪುವಿನನೊಡಗೂಡಿದಂತಾಗುತ್ತಾನೆ, ಜ್ಯೋ ೯ ತಿ ಪರಂಜ್ಯೋತಿಯಲ್ಲಿ ಬೆರೆತು ಹೋಗುತ್ತದೆ.'

"ಇವು ಶಿವಶರಣರ ವಚನಗಳಲ್ಲಿ ಬಹು ಸುಂದರವಾದವುಗಳು. ಮಹಾಶಿವಶರಣೆಯಾದ ಮಹಾದೇವಿಯಕ್ಕನ ವಚನಗಳಿಗೆ ಸರಿಸಮಾನವಾಗಿವೆ. ಇವು ಆಕೆಯ ವಚನಗಳೆಷ್ಟೇ ಸುಂದರವೂ, ಲಲಿತವೂ, ಮಧುರವಾಗಿರುತ್ತವೆ" ಎಂದು ವಚನಪಿತಾಮಹಾ ಡಾ॥ ಫ. ಗು. ಹಳಕಟ್ಟಿಯವರು ನಿರ್ಣಯಿಸಿದ ಅಭಿಪ್ರಾಯವು ಯಥೋಚಿತವಾಗಿದೆ.

ಜೀವಾತ್ಮ ಪರಮಾತ್ಮನಾಗುವ, ಮಾಂಸಪಿಂಡವಳಿದು ಮಂತ್ರಪಿಂಡವಾಗುವ ಮಹಾಮಂತ್ರ ಸ್ವರೂಪವಾಗಿರುವ ಇವನ ವಚನಗಳು ನಿಜವಾಗಿಯೂ ಮನನೀಯವಾಗಿವೆ. ಅಭ್ಯಾಸ ಪೂರ್ಣವಾಗಿವೆ. ಗಾದೆಯಂತಹ ಮಾತುಗಳನ್ನು ಇವನ ವಚನಗಳಲ್ಲಿ ಧಾರಾಳವಾಗಿ ಗುರುತಿಸಬಹುದು. ಉದಾಹರಣೆಗೆ 1) ಒಲಿದವರ ಕೊಲುವಡೆ ಮಸೆದ ಕೂರಲಗೇಕವ್ವಾ ಅವರನೊಲ್ಲೆನೆಂದರೆ ಸಾಲದೆ ?....ದೂರದಲ್ಲಿರ್ದವರ ನೆನೆವರಲ್ಲದೆ ಸಮೀಪದಲ್ಲಿರ್ದವನಾರೂ ನೆನೆಯರವ್ವಾ 'ಮಾತಂಗಿಯ ಹೊಳೆಯಲ್ಲಿ ಉತ್ತಮನ ನೆಳಲು ಸುಳಿದೆಡೆ ರೂಹು ಹೊಲೆಯನಾಗಬಲ್ಲುದೆ ಲ್ಲಯ್ಯಾ?' ಈ ಮಾತುಗಳನ್ನು ಗಮನಿಸಿದರೆ ಬಸವಣ್ಣನವರ ವಚನಗಳ ಶೈಲಿಯ ಛಾಯೆ ಎದ್ದು ಕಾಣುವಂತಿದೆ. ಚಿಕ್ಕ ಚಿಕ್ಕ ಮಾತುಗಳಲ್ಲಿ ದೊಡ್ಡ ಭಾವವನ್ನು ನಿರೂಪಿಸುವ ಶಕ್ತಿ ಈತನದು. ಷಟ್‌ಸ್ಥಲದ ಮರ್ಮವನ್ನು ಒಂದೇ ವಚನದಲ್ಲಿ ಆತ ಹೀಗೆ ನಿರೂಪಿಸಿದ್ದಾನೆ.

"ಹೊಸ ಮದುವೆಯ ಹಸೆಯುಡಗದ ಮುನ್ನ
ಪೂಸಿದ ಅರಿಸಿನ ಬಿಸಿಲಿಂಗೆ ಹರಿಯುದ ಮುನ್ನ
ತನು ಸಂಚಲವಡಗಿ ಮನವು ಗುರುಕಾರುಣ್ಯವ ಪಡೆದು
ಹಿಡಿಯಲಿಲ್ಲದಿರ್ದಡೆ ಮಹೇಶ್ವರನೆಂಬೆ
ತನುವಿಲ್ಲದಿರ್ದಡೆ ಪ್ರಸಾದಿಯೆಂಬೆ
ಆಶೆಯಿಲ್ಲದಿರ್ದಡೆ ಶರಣನೆಂಬೆ
ಇಂತಾಗಬೇಕೆಂಬ ಈ ಮನದ ದೇಹವನಿರಿದರಿಯದು



ತರುದಡರಿಯದು ಸ್ತುತಿಸಿದಡರಿಂದು
ಸುಖವನರಿಯದು ದುಃಖವನರಿಯದು
ಈ ಚತುರ್ವಿಧವನರಿಯದಿರ್ದಡೆ ಆತನೇ ಮಹಾಲಿಂಗ ಗಜೇಶ್ವರಾ"

ಶಿವಶರಣರು ಸಂಗೀತದಲ್ಲಿಯೂ ಪ್ರವೀಣರಾಗಿದ್ದರು. ಅಂತೆಯೇ ಸುಮಾರು ಮೂವತ್ತು ಶಿವಶರಣ-ಶರಣೆಯರು ಸ್ವರ ವಚನಗಳನ್ನು ರಚಿಸಿರುವುದೇ ಮೇಲಿನ ಮಾತಿಗೆ ಸಾಕ್ಷಿ. ವಚನಕಾರ ಗಜೇಶ ಮಸಣಯ್ಯನೂ ಸಂಗೀತ ಪ್ರೇಮಿಯಾಗಿದ್ದನು. ಈ ಕೆಳಗಿನ ವಚನವೇ ನಿದರ್ಶನ.

"ದೇಶಾಕ್ಷಿಯಲ್ಲದ ರಾಗ, ಉಪ್ಪಿಲ್ಲದ ಊಟ ಸಪ್ಪೆ ಕಾಣಿರೋ
ಅಯ್ಯಾ, ಮಿಕ್ಕಿದ ರಾಗ ಶಿವನಲ್ಲದ ದೈವ ಫಲವಿಲ್ಲಕಾಣಿರೋ
ಅಯ್ಯಾ ಮಿಕ್ಕಿನ ತುಂಬುರ ನಾರದರು ಶಿವನ ಕೇಳಿಸುವ ರಾಗ
ಮಹಾಲಿಂಗ ಗಜೇಶ್ವರನ ಮೆಚ್ಚಿನ ರಾಗ ಕಾಣಿರೋ"

ದೇಶಾಕ್ಷಿ ರಾಗವೆಂದರೆ ಮಸಣಯ್ಯನವರಿಗೆ ಪಂಚಪ್ರಾಣವೆಂಬುದು ಮೇಲಣ ವಚನದಲ್ಲಿ ಸುಸ್ಪಷ್ಟವಾಗಿದೆ. ತತ್ತ್ವರೂಪವಾದ ಬಸವಾದಿ ಪ್ರಮಥರನ್ನು ಹಾಡಿ ಹೊಗಳಿದ ಈ ವಚನದಲ್ಲಿ ಬಸವಣ್ಣ, ಚೆನ್ನಬಸವಣ್ಣ, ಪ್ರಭುದೇವರು ಕರ ಮನ ಭಾವಗಳಲ್ಲಿ ಮೂಡಿ ಬಂದು ಇಷ್ಟ ಪ್ರಾಣ ಭಾವಗಳಾಗಿ ನಿಂತ ವಿಚಾರ ವ್ಯಕ್ತವಾಗಿದೆ.

"ಎನ್ನ ಕರಸ್ಥಲವೇ ಬಸವಣ್ಣನಯ್ಯಾ
ಎನ್ನ ಮನಸ್ಥಲವೇ ಚೆನ್ನ ಬಸವಣ್ಣನಯ್ಯಾ
ಎನ್ನ ಭಾವಸ್ಥಲವೇ ಪ್ರಭುದೇವರಯ್ಯ
ಇಂತೆನ್ನ ಕರ ಮನ ಭಾವಂಗಳಲ್ಲಿ
ಇಷ್ಟ ಪ್ರಾಣ ಭಾವಂಗಳು ತಲ್ಲೀಯವಾಗಿ
ಮಹಾಲಿಂಗ ಗಜೇಶ್ವರಾ ನಿಮ್ಮ ಶರಣರ ಘನವನು
ಎನ್ನ ಸರ್ವಾಂಗದಲ್ಲಿ ಕಂಡು ಪರಮ ಸುಖಿಯಾಗಿರ್ದೆನು"

ಈ ವಚನದ ಆಧಾರದಿಂದ ಮಸಣಯ್ಯನವರು ಬಸವಾದಿ ಪ್ರಮಥರ ಸಮಕಾಲೀನರಾಗಿ ಬಾಳಿ ಬೆಳಗಿರಬಹುದೆಂದು ಧಾರಾಳವಾಗಿ ಹೇಳಬಹುದು. ಅವನ ವಚನಗಳಲ್ಲಿರುವ ಕೆಲವು ನುಡಿ ಮುತ್ತುಗಳಿವು; ಇಲ್ಲಿ ಅವನ ಮನೋಧರ್ಮವನ್ನು ಕಾಣಬಹುದು.

1. ಬೇಡದ ಮುನ್ನವೆ ಮಾಡಬಲ್ಲಡೆ ಸದ್ಭಕ್ತನೆಂಬೆ
2. ದಿಬ್ಬವ ತುಡುಕಿದರೆ ಕೈ ಬೇಡುವುದಲ್ಲದೆ ಮೈ ಬೇವುದೆ ?
3. ಉರಗನ ಬಾಯ ಕಪ್ಪೆಯಂತೆ ಸಂಸಾರ
4. ಇದ್ದಿಲ ಹಿಂಡಿದಡೆ ರಸವುಂಟೆ ?
5. ಮಾತಂಗಿಯ ಹೊಳೆಯಲ್ಲಿ ಉತ್ತಮನ ನೆಳಲು ಸುಳಿದಡೆ ರೂಹು ಹೊಲೆಯನಾಗಬಲ್ಲುದೆ ?
6. ತುಪ್ಪಳ ವಿಕ್ಕಿದ ಹಂಸೆಯಂತಾದೆನವ್ವಾ
7. ಕಾಮುಂಗಂಜಿ ಚಂದ್ರಮನ ಮರೆಹೋಗಲು ರಾಹು ಕೊಂಡಂತಾದಳವ್ವ

ಇವನ ಸಹಧರ್ಮಿಣಿಯೂ ಶ್ರೇಷ್ಠ ವಚನಕಾರ್ತಿಯಾಗಿದ್ದಳು. ಅವಳ ಹೆಸರು ಗೊತ್ತಾಗುವದಿಲ್ಲ. ಗಜೇಶ ಮಸಣಯ್ಯಗಳ ಪುಣ್ಯಸ್ತ್ರೀ ಎಂದೇ ಗುರುತಿಸಲಾಗಿದೆ. ಇವಳ ಒಂಬತ್ತು ವಚನಗಳು ಉಪಲಬ್ಧವಿವೆ. ಅಂಕಿತ 'ಮಸಣಯ್ಯ ಪ್ರಿಯ ಗಜೇಶ್ವರಾ' ಗುರುವಿನ ಮಹಿಮೆ ಗುರುವಿನಲ್ಲಿ ದೃಢನಿಷ್ಠೆ ಈ ವಚನಗಳಲ್ಲಿ ಅಭಿವ್ಯಕ್ತ ಹೊಂದಿವೆ.

ಅಂಗದ ಮೇಲಣ ಲಿಂಗವು ಲಿಂಗವಲ್ಲ
ಮನದ ಮೇಲಣ ಲಿಂಗವು ಲಿಂಗವಲ್ಲ
ಭಾವದ ಮೇಲಣ ಲಿಂಗವು ಲಿಂಗವಲ್ಲ
ಅಂಗದ ಮೇಲಣ ಲಿಂಗ ವ್ಯವಹಾರ
ಮನದ ಮೇಲಣ ಲಿಂಗ ಸಂಕಲ್ಪ
ಭಾವದ ಮೇಲಣ ಲಿಂಗ ಭ್ರಾಂತು ತತ್ತ್ವ
ಆಳಿನ ಆಳು ಅರಸಪ್ಪನ ಆಳನಾಳುವವನರಸನಲ್ಲ ?
ಅಂಗ ಪ್ರಾಣ ಭಾವಂಗಳನೊಳಕೊಂಡಿರ್ಪುದೆ ಲಿಂಗ
ಕಾಣಾ ಮಸಣಯ್ಯ ಪ್ರಿಯ ಗಜೇಶ್ವರ

ವೈಜ್ಞಾನಿಕ ತಳಹದಿಯ ಮೇಲೆ ಶಾಸ್ತ್ರೀಯವಾಗಿ ವೀರಶೈವ ತತ್ತ್ವವನ್ನು ವಿವೇಚಿಸಿರುವ ಮೇಲಣ ಆಕೆಯ ದಿಟ್ಟವಾದ ವ್ಯಕ್ತಿತ್ವವನ್ನು ಎತ್ತಿ ತೋರಿಸುತ್ತದೆ. ಹನ್ನೆರಡನೆಯ ಶತಮಾನ ನಿಜವಾಗಿ ಒಂದು ಸುವರ್ಣಯುಗ ? ಮಹಿಳೆಯರಿಗೆ ಸರ್ವಸ್ವತಂತ್ರ ನೀಡಿದ್ದರಿಂದಲೇ ಮೂವತ್ತೇಳಕ್ಕೂ ಮಿಕ್ಕಿ ಈ ಬಗೆಯ ವಚನಕಾರರು ಬೆಳಗಿ ಕನ್ನಡ ಕೀರ್ತಿ ಪತಾಕೆಯನ್ನು ಎತ್ತಿ ಹಿಡಿದಿದ್ದಾರೆ. ಈ ಬಗೆಯ ಅಜ್ಞಾತ ಶಿವಶರಣೆಯರನ್ನು ಪರಿಚಯಿಸುವದು ಅತ್ಯಂತ ಅವಶ್ಯವೆಂದು ಭಾವಿಸುವೆ.



( 24 ನೇ ಪುಟದಿಂದ )

ಪ್ರತಿವರ್ಷ ನಮ್ಮ ದೇಶದಲ್ಲಿ 100 ಕ್ವಿಂಟಾಲ್‌ನಷ್ಟು ಬೇರು 30 ಕ್ವಿಂಟಾಲ್‌ನಷ್ಟು ಎಲೆಗಳನ್ನು ಔಷಧರೂಪದಲ್ಲಿ ಉಪಯೋಗಿಸಲಾಗುತ್ತಿದೆ.

೭) 'ನಾಗಾರ್ಜನಿ ಗಿಡ' ಅಂದರೆ Euphorbia hirta

ಈ ಗಿಡದಲ್ಲಿರುವ ಔಷಧಕ್ಕೆ ಶ್ವಾಸಕಾಂಗಗಳಲ್ಲಿರುವ ವಾಯು ಕೋಶಗಳನ್ನು ವಿಕಾಸಗೊಳಿಸುವ ಶಕ್ತಿ ಇದೆ. ಅಲ್ಲದೆ ಇದು ಗೋನೋರಿಯಾ, ಕೆಮ್ಮು, ಮತ್ತು ಮೂತ್ರ ವಿಸರ್ಜನೆಯ ತೊಂದರೆಗಳನ್ನು ಉಪಶಮನಗೊಳಿಸುತ್ತದೆ.

೮) 'ಆಡಸೋಗೇ ಗಿಡ' ಅಥವಾ ಆಡುಮುಟ್ಟದಗಿಡ ಅಂದರೆ Adathoda vesica ಈ ಸಸ್ಯದಲ್ಲಿ 'ವಾಸಿಸಿನ್' ಎಂಬ ಔಷಧವಿದ್ದು 'ಗ್ಲೈಕೋಡಿನ್' ಮುಂತಾದ ಕೆಮ್ಮು ನಿರೋಧಕ ಔಷಧಗಳ ತಯಾರಿಕೆಯಲ್ಲಿ ಇದನ್ನು ಮುಖ್ಯವಾಗಿ ಬಳಸುತ್ತಾರೆ.

ಸಿಂಕೋನ ಮರದ ತೊಗಟೆ: 'ಕ್ವಿನೈನ್' ಎಂಬ ಔಷಧಕ್ಕೆ ಮೂಲ ಮಲೇರಿಯಾ ಹಾಗೂ ಇತರ ವಿಷಕ್ರಿಮಿಗಳಿಂದ ಉಂಟಾಗುವ ಜ್ವರಗಳನ್ನು ತಡೆಗಟ್ಟುತ್ತದೆ. ಕಣ್ಣಿಗೆ ಉಪಯೋಗಿಸುವ ಲೋಷನ್‌ಗಳ ತಯಾರಿಕೆಯಲ್ಲಿ ಹಾಗೂ ನಿಮೋನಿಯಾ ಮತ್ತು ಆಮಶಂಕೆ ಭೇದಿ ಔಷಧ ತಯಾರಿಕೆಯಲ್ಲೂ ಇದನ್ನು ಹೆಚ್ಚಾಗಿ ಉಪಯೋಗಿಸುತ್ತಾರೆ.

# ಪ್ಲಾಸ್ಟಿಕ್‌ನಿಂದ ಆರೋಗ್ಯಕ್ಕೆ ಹಾನಿ ಇದೆಯೇ ?

—ಪ. ರಾಮಕೃಷ್ಣಶಾಸ್ತ್ರಿ

ಇಂದು ಜನಜೀವನಕ್ಕೆ ಅವಶ್ಯವಾಗಿರುವ ಸಣ್ಣಪುಟ್ಟ ವಸ್ತುಗಳಿಂದಾರಂಭಿಸಿ ಭಾರೀ ಕೈಗಾರಿಕೆಗಳವರೆಗೂ ಪ್ಲಾಸ್ಟಿಕ್ಕಿನ ಉಪಯೋಗ ಅಸಾಧಾರಣ. ಪ್ಲಾಸ್ಟಿಕ್‌ನಂತಹ ವಸ್ತು ಇಲ್ಲವಾದರೆ ಜನ ಸಾಮಾನ್ಯರಿಗಂತೂ ತೀವ್ರ ಆಘಾತವೆನಿಸಬಹುದು. ಆದರೆ ಪ್ಲಾಸ್ಟಿಕ್‌ನಿಂದ ಆರೋಗ್ಯಕ್ಕೆ ತೀವ್ರ ಹಾನಿ ಇದೆ ಎಂದು ವಿಜ್ಞಾನಿಗಳು ಎಚ್ಚರಿಸುತ್ತಾರೆ. ಕಠಿಣವಾದ ಪ್ಲಾಸ್ಟಿಕ್ಕನ್ನು ಮೃದುಗೊಳಿಸದೆ ವಸ್ತುಗಳನ್ನು ತಯಾರಿಸುವಂತಿಲ್ಲ. ಅದನ್ನು ಮೆತ್ತಗಾಗಿಸಲು 'ಪ್ಲಾಸ್ಟಿಸೈಸರ್' ಎಂಬ ರಾಸಾಯನಿಕಗಳನ್ನು ಬೆರೆಸುತ್ತಾರೆ. ಇದರಲ್ಲಿ ಫಾಸ್ಫೇಟ್ಸ್ ತಾಲೈಟ್ಸ್, ಪೋಲಿಕ್ಲೋರಿನೇಟೆಡ್ ಬೈಫಿನೈಲ್ ಎಂಬ ದ್ರವ್ಯಗಳು ಗಣನೀಯ ಅಂಶದಲ್ಲಿ ಬೆರೆತಿದ್ದು ಪ್ಲಾಸ್ಟಿಕ್ಕನ್ನು ಆರೋಗ್ಯಕ್ಕೆ ಹಾನಿಕಾರಕವೆನಿಸಲು ಶಕ್ತವಾಗಿವೆ.

ಅಮೇರಿಕದ ಬಾಲ್ಟಿಮೋರಿನಲ್ಲಿ ಇರುವ ಕಾರ್ನಿಗಿ ಇನ್‌ಸ್ಟಿಟ್ಯೂಟಿನ ಜೀವಶಾಸ್ತ್ರಜ್ಞ ಡಾ॥ ರಾಬರ್ಟ್ ಡಿ. ಹಾನ್ ಮತ್ತು ಅವರ ಸಂಗಡಿಗ ವಿಜ್ಞಾನಿ ಡಾ॥ ರೂಬಿನ್ಸ್‌ರು ನಡೆಸಿದ ಹಲವು ಸಂಶೋಧನೆಗಳಿಂದ ಪ್ಲಾಸ್ಟಿಕ್ ಶಾಕ್‌ಲಂಗ್‌ನಂತಹ ಖಾಯಿಲೆಗಳನ್ನು ತರಬಹುದೆಂದೂ ಗೊತ್ತಾಗಿದೆ. ಮುಂದುವರೆದ ಶೋಧನೆಗಳ ಫಲವಾಗಿ ಈ ವಿಷ ರಾಸಾಯನಿಕಗಳು ಗರ್ಭಿಣಿಯರ ಶರೀರದೊಳಗೆ ಪ್ರವೇಶಿಸಿದರೆ ಗರ್ಭಚೀಲವನ್ನೂ ಪ್ರವೇಶಿಸಿ, ಮಗುವನ್ನು ಅಂಗವಿಕಲಗೊಳಿಸಬಹುದೆಂದು ಗೊತ್ತಾಗಿದೆ. ಜಪಾನಿನ ವಿಜ್ಞಾನಿಗಳು ಅದು ಮಗುವನ್ನು ವಕ್ರಗೊಳಿಸುವುದಾಗಿ ಹೇಳುತ್ತಾರೆ.

ಈ ರಾಸಾಯನಿಕಗಳು ಮೃಗಗಳ ರಕ್ತ ಮತ್ತು ಮೂತ್ರಕೋಶದಲ್ಲಿ ಪತ್ತೆಯಾಗಿವೆ. ಮೃಗಗಳ ಕರುಳು ಸಂಬಂಧ ವ್ಯಾಧಿಗಳೂ ರಕ್ತ ಗಟ್ಟಿಯಾಗಲೂ ಇದರಿಂದಲೇ ಸಾಧ್ಯವಾಗಿದೆಯೆಂದು ವಿಶ್ವ ಆರೋಗ್ಯ ಸಂಸ್ಥೆಯ ವರದಿ ಸಾರುತ್ತದೆ. ಗ್ಲಾಸ್ ರಲ್ಲಿ ವಿಯೆಟ್ನಾಂ ಸಂಗ್ರಾಮದಲ್ಲಿ ಘಾಸಿಗೊಂಡ ಸೈನಿಕರಿಗೆ ರಕ್ತ ಪೂರೈಸಲು ಗಾಜಿನ ಶೀಸೆಗಳ ಬದಲು ಪ್ಲಾಸ್ಟಿಕ್‌ನಿಂದ ತಯಾರಿಸಲಾದ ಪಿ.ವಿ.ಸಿ. ಶೀಸೆಗಳನ್ನು ಉಪಯೋಗಿಸಲಾಯಿತು. ರಕ್ತ ನೀಡಲಾದ ಸೈನಿಕರ ಪರಿಸ್ಥಿತಿ ಕ್ಷಣಕ್ಷಣಕ್ಕೂ ವಿಪರೀತಾವಸ್ಥೆಗೆ ತಲುಪಿದುದರಿಂದ ವೈದ್ಯರು ಕಂಗಾಲಾದರು. ಇದಕ್ಕೆ ಕಾರಣ ಪ್ಲಾಸ್ಟಿಕ್ ಎಂಬುದು ಸಂಶೋಧನೆಗಳಿಂದ ಗೊತ್ತಾಯಿತು. ಅದರಿಂದ ರಕ್ತ ಪಡೆದ ಎಲ್ಲರೂ ಒಂದಿಲ್ಲೊಂದು ಹೊಸ ಬಗೆಯ ಖಾಯಿಲೆಗೆ ಬಲಿಯಾಗಿದ್ದರು. ಈ ಅವಸ್ಥೆಗೆ ವಿಜ್ಞಾನಿಗಳು ಶಾಕ್‌ಲಂಗ್ ಎಂದು ಕರೆಯುತ್ತಾರೆ.



ಟೆಕ್ಸಾಸಿನ ವಿಶ್ವವಿದ್ಯಾನಿಲಯದಲ್ಲಿ ನಡೆಸಿದ ಹಲವು ಶೋಧನೆಗಳಿಂದ ಪ್ಲಾಸ್ಟಿಕ್ಕನ್ನು ಜನಜೀವನದ ಶತ್ರುವೆಂದೇ ಪರಿಗಣಿಸಬೇಕಾಗಿದೆ. ಅದರಲ್ಲಿರುವ ತಾಲೈಟ್ಸ್ ರಾಸಾಯನಿಕ ಗರ್ಭದಲ್ಲಿರುವ ಮಗುವಿನ ಬೆಳವಣಿಗೆಯನ್ನೇ ಕುಂಠಿತಗೊಳಿಸುತ್ತದೆ. ಮಗುವಿನ ನರಮಂಡಲದ ಕೇಂದ್ರವನ್ನು ಆಕ್ರಮಿಸಿ ಕಣ್ಣುಗಳ ದೃಷ್ಟಿಯನ್ನು ವ್ಯತ್ಯಯಗೊಳಿಸಿ ತಲೆಬುರುಡೆಗೂ ಹಾನಿ ತರುವುದಂತೆ. ಅದರಲ್ಲೂ ಪಿ.ವಿ.ಸಿ. ವರ್ಗದ ಪ್ಲಾಸ್ಟಿಕ್ ಅತ್ಯಂತ ಹೆಚ್ಚು ಅಪಾಯಕಾರಿ ಎನಿಸಿದೆ. ಇದರಲ್ಲಿ ವಿನೈಲ್ ಕ್ಲೋರೈಡ್ ಎಂಬ ರಾಸಾಯನಿಕ ವಿಪುಲವಾಗಿ ಅಡಕಗೊಂಡಿದೆ. ಈ ವಿಷ ರಾಸಾಯನಿಕದಿಂದಾಗಿ ಅಮೇರಿಕದಲ್ಲಿ ಹತ್ತೊಂಬತ್ತು ಜನ ರೋಗಿಗಳು ಅತಿ ಅಪರೂಪವಾದ ಅಂಜಿಯೋಸರ್ಕೋಮಾ (ಕರುಳಿಗೆ ಸಂಬಂಧಿಸಿದ ಕ್ಯಾನ್ಸರು) ವ್ಯಾಧಿಗೆ ತುತ್ತಾಗಿರುವುದು ಬೆಳಕಿಗೆ ಬಂತು. ಈ ರಾಸಾಯನಿಕದ ಉಪಟಳ ಅಷ್ಟೇ ಅಲ್ಲ, ಹೃದಯಪೇಶಿಗಳ ಶಕ್ತಿಯನ್ನು ಅದು ಕುಂದಿಸಬಹುದು, ಮೆದುಳಿನಲ್ಲಿ ಸಂಕೇತಗಳನ್ನು ಗ್ರಹಿಸುವ ಹೈಪೊಥಲಾಮಸ್ ಅಂಗದ ಚಟುವಟಿಕೆಗಳನ್ನು ನಿಷ್ಕ್ರಿಯಗೊಳಿಸಬಹುದೆಂದೂ ಪ್ರಕಟವಾಗಿದೆ. ಕೈಕಾಲುಗಳ ಬೆರಳುಗಳಲ್ಲಿ ನೆತ್ತರಿನ ಸಂಚಲನೆಯನ್ನು ಸ್ಥಗಿತಗೊಳಿಸಲೂ ಕಾರಣವಾಗಬಲ್ಲ ವಿನೈಲ್ ಕ್ಲೋರೈಡ್ ರಾಸಾಯನಿಕದಿಂದಾಗಿ ಎಲುಬುಗಳಿಗೂ ಧಕ್ಕೆಯಾಗಬಹುದು.

ಪ್ಲಾಸ್ಟಿಕ್ ಉಪಕರಣಗಳನ್ನು ತಯಾರಿಸುವಾಗ ಆರ್ಥೋ ಟ್ರೈಕ್ರೆಸೈನ್ ಎಂಬ ಸಾಧಾರಣ ರಾಸಾಯನಿಕವನ್ನೂ ಉಪಯೋಗಿಸುತ್ತಾರೆ. ಬಂಗಾಳದಲ್ಲಿ ಕೆಲವು ವ್ಯಾಪಾರಿಗಳು ಇದನ್ನು ಸಾಸಿವೆಯೆಣ್ಣೆಗೆ ಕಲಬೆರಕೆಗೊಳಿಸಿ ಮಾರಾಟ ಮಾಡುತ್ತಾರೆ. ಆದರಿಂದಾಗಿ ಕಲ್ಕತ್ತೆಯ ಕೊಳಚೆ ನಿವಾಸಿಗಳು ಕೈಕಾಲುಗಳನ್ನು ನಿಷ್ಕ್ರಿಯಗೊಳಿಸುವ ಪಕ್ಷವಾತಕ್ಕೆ ಬಲಿಯಾದ ದುರ್ಘಟನೆಯನ್ನು ಮರೆಯುವಂತಿಲ್ಲ. ನರನಾಡಿಗಳ ಕೇಂದ್ರವನ್ನೇ ವ್ಯಾಪಿಸಿ, ಈ ರಾಸಾಯನಿಕ ಪೀಡಿಸಬಹುದು. ಅಮೇರಿಕದಲ್ಲಿ ಹಿಂದೆ ಶುಂಠಿಯಿಂದ ತಯಾರಿಸಿದ 'ಜಮೈಕಾ' ಮಾದಕ ಪಾನೀಯದಲ್ಲಿ ಈ ರಾಸಾಯನಿಕ ಬೆರೆಸಿದ ಪರಿಣಾಮ–ಐದು ಸಹಸ್ರ ಮಂದಿ ಪಾನಪ್ರಿಯರು ಪಕ್ಷವಾತ ರೋಗಕ್ಕೆ ಈಡಾದರು. ಜಪಾನಿನಲ್ಲಿ ಮಕ್ಕಳ ಅಂಗವಿಕಲತೆಗೆ ಇದು ಹಿರೋಷಿಮಾದ ಅಣುಬಾಂಬಿನಷ್ಟೇ ಕಾರಣವಾಗಿದೆಯೆಂಬ ಭಾವನೆಯಿದೆ.

ಅಮೇರಿಕಾದಲ್ಲಿ ತಿಂಡಿ ತೀರ್ಥಗಳನ್ನೂ ಔಷಧಿಗಳನ್ನೂ ಸಂಗ್ರಹಿಸಿಡುವುದಕ್ಕಾಗಿ ನಿರಪಾಯಕಾರಿ ರಾಸಾಯನಿಕಗಳ ಸಂಯೋಗದಿಂದ ವಿಶೇಷ ಪ್ಲಾಸ್ಟಿಕ್ಕನ್ನು ತಯಾರಿಸಲಾಗುತ್ತದೆ. ನಮ್ಮ ದೇಶದಲ್ಲಿ ಅಂತಹ ಪ್ಲಾಸ್ಟಿಕ್ ತಯಾರಾಗುವುದಿಲ್ಲ. ಪ್ಲಾಸ್ಟಿಕ್ಕಿನಲ್ಲಿರುವ ರಾಸಾಯನಿಕಗಳು ನೀರಿನಲ್ಲಿ ಬೆರೆಯುವುದಿಲ್ಲ. ಇಂಡಿಯನ್ ಸ್ಟಾಂಡರ್ಡ್ ಇನ್‌ಸ್ಟಿಟ್ಯೂಟ್ ಪ್ಲಾಸ್ಟಿಕ್ ಉಪಕರಣಗಳನ್ನು ಬಳಸುವವರಿಗೆ ಸರಿಯಾದ ಮಾರ್ಗದರ್ಶನವೀಯುತ್ತಾ "ಈ ರಾಸಾಯನಿಕಗಳು ತುಪ್ಪ, ಎಣ್ಣೆ ಮುಂತಾದ ಕೊಬ್ಬಿನ

ಪದಾರ್ಥಗಳಲ್ಲೂ ಹಾಲು, ಕ್ರೀಮ್, ಮಾದಕ ಪೇಯಗಳು, ಉಪ್ಪು, ಸಕ್ಕರೆ, ಶೃಂಗಾರ ಪ್ರಸಾಧನಗಳಲ್ಲೂ ಬಲು ಬೇಗನೆ ಬೆರೆತು ನಮಗೆ ಅಪಾಯವುಂಟು ಮಾಡುತ್ತವೆ. ಆದ್ದರಿಂದ ಅಂತಹ ಪದಾರ್ಥಗಳನ್ನು ಪ್ಲಾಸ್ಟಿಕ್ ಜಾಡಿಗಳಲ್ಲಿ ಹಾಕಿಡಬೇಡಿ" ಎಂದು ಬಳಕೆದಾರರನ್ನು ಎಚ್ಚರಿಸುತ್ತದೆ.

ಆದ್ದರಿಂದ ಪ್ಲಾಸ್ಟಿಕ್ ಉಪಕರಣಗಳನ್ನು ನಿಶ್ಚಿಂತೆಯಿಂದ ಬಳಸುವಂತಿಲ್ಲ. ಆಹಾರ ಪದಾರ್ಥಗಳನ್ನು ಅದರಲ್ಲಿ ಶೇಖರಿಸುವುದರಿಂದ ದೇಹಕ್ಕೆ ನಿಧಾನ ವಿಷವಾಗಿ ಪರಿಣಮಿಸೀತು !

---

## ಓದುಗರಲ್ಲಿ ನಮ್ರ ವಿನಂತಿ

ಕಾಗದದ ಬೆಲೆ ಮತ್ತು ಮುದ್ರಣದ ಖರ್ಚು ಮಿತಿ ಮೀರಿ ಹೆಚ್ಚುತ್ತಿರುವುದರಿಂದ ಸಿದ್ಧಗಂಗಾ ಮಾಸ ಪತ್ರಿಕೆಯ ಚಂದಾ ಹಣವನ್ನು ಅನಿವಾರ್ಯವಾಗಿ **1982** ನೇ ಜನವರಿಯಿಂದ **15-00** ರೂಗಳಿಗೆ ನಿಗದಿಮಾಡಲಾಗಿದೆ.

ಮಾನ್ಯ ಓದುಗರು ಈ ಪರಿಸ್ಥಿತಿ ತಿಳಿದು ಹಿಂದಿನಂತೆ "ಸಿದ್ಧಗಂಗಾ" ದ ಬಗೆಗೆ ವಿಶೇಷ ಆದರಾಭಿಮಾನಗಳನ್ನು ಹೊಂದಿ ಪ್ರೋತ್ಸಾಹಿಸುವಿರಾಗಿ ಆಶಿಸಿದ್ದೇವೆ.

ಪ್ರಕಾಶಕರು.

---

"ಸಿದ್ಧಗಂಗಾ ಪತ್ರಿಕಾ ಕಛೇರಿಗೆ ವ್ಯವಹರಿಸುವಾಗ ತಮ್ಮ ಚಂದಾ ನಂಬರನ್ನು ತಪ್ಪದೇ ಬರೆಯುಬೇಕು."

---



# ಇಡೀ ಪಟ್ಟಣವನ್ನು ನಾಶಮಾಡಿದ ಅಣುಬಾಂಬ್

—ಕ್ಯಾಪ್ಟನ್ ಎಂ. ಜಿ. ಕೆ. ಮೂರ್ತಿ

ಪರಮಾಣುಗಳೊಳಗೆ ಅಡಗಿರುವ ಪ್ರಚಂಡ ಶಕ್ತಿಗೆ ಮಿತಿಯೇ ಇಲ್ಲ. 1945 ನೇ ಇಸವಿ ಜುಲೈ 16 ನೇ ದಿನ ಅರುಣೋದಯ ಕಾಲದಲ್ಲಿ ಅಮೇರಿಕದ ನ್ಯೂ ಮೆಕ್ಸಿಕೋ ದೇಶದ ಮರುಭೂಮಿಯಲ್ಲಿ ಆಲ್ಮೊಗಾರ್ಡೋ ಎಂಬ ಸ್ಥಳದಲ್ಲಿದ್ದ ವಾಯು ಪಡೆಯ ಬಹು ಎತ್ತರವಾದ ಉಕ್ಕಿನ ಗೋಪುರದ ಮೇಲೆ ಅಣುಬಾಂಬಿನ ಮೊಟ್ಟ ಮೊದಲ ನಿಜಪರೀಕ್ಷೆ ಡಾ॥ ಒಪ್ಪೆನ್ ಹೈಮರ್ ಎಂಬ ಅಣುಶಾಸ್ತ್ರ ತಜ್ಞನ ನಾಯಕತ್ವದಲ್ಲಿ ನಡೆಯಿತು.

ಪ್ರಜ್ವಲಿಸುವ ರಾಕ್ಷಸ ಜ್ವಾಲೆಗಳು ಮುಗಿಲೆತ್ತರ ಭುಗಿಲೆದ್ದು ಹಲವಾರು ಮೈಲು ದೂರ ಮರಳುಕಾಡನ್ನೂ, ಪರ್ವತಗಳನ್ನೂ ಬೆಳಗಿದವು. ಗುಡುಗಿನಂಥ ಗರ್ಜನೆಗಳು ಆರ್ಭಟಿಸುತ್ತಾ ಹೋದವು. ಗಾಳಿಯ ಹೊಡೆತವೆದ್ದಿತು. ಅಗಾಧವಾದ ಚಿತ್ರವಿಚಿತ್ರ ಬಣ್ಣಗಳ ಧೂಮಸ್ತೋಮಗಳು ಕುದಿಯುತ್ತಾ ಮೇಲೆದ್ದು ಎಂಟು ಮೈಲಿಗಳೆತ್ತರದ ದೈತ್ಯ ಕಂಬಗಳಂತೆ ಹಬ್ಬಿಕೊಂಡವು. ಅವುಗಳ ರಭಸಕ್ಕೆ ಮಳೆಯ ಮೋಡಗಳು ಪಕ್ಕಕ್ಕೆ ಸರಿದು ಅವುಗಳಿಗೆ ದಾರಿಮಾಡಿದವು. ಅದೇ ಪೃಥ್ವಿಯ ಪ್ರಪ್ರಥಮ ಅಣುಬಾಂಬಿನ ಸ್ಫೋಟನ. ಅಂದು ಆಟಾಮಿಕ್ ಯುಗವು ಆರಂಭಿಸಿತು.

### ಅಣುಬಾಂಬಿನ ಪ್ರಯೋಗ

ನಾಜಿ ಜರ್ಮನಿಯ ಭೀಕರ ಸೇನೆಗಳಿಗೆ ಅಪಜಯವಾಗಿತ್ತು. ಹಿಟ್ಲರ್ ಮಡಿದಿದ್ದ. ಏಕಾಧಿಪತಿ ಮುಸಲೋನಿಯೂ ಮಡಿದು ಇಟಲಿಯು ಎದುರು ಪಕ್ಷಕ್ಕೆ ಸೇರಿಕೊಂಡಿತ್ತು. ಅವರೊಡನೆ ಜಗತ್ತನ್ನೇ ಜಯಿಸುವ ನಿರೀಕ್ಷಣೆಯಲ್ಲಿದ್ದ ಜಪಾನ್ ಒಂಟಿಯಾಗಿ ನಿಂತಿತು. ಜನರಲ್ ಮೆಕ್ ಆರ್ಥರ್‌ನ ಸೇನೆಗಳು ಜಪಾನಿನ ರಕ್ಷಣೆಯಲ್ಲಿದ್ದ ದ್ವೀಪಗಳೊಳಗೆ ನುಗ್ಗಿದ್ದವು. ಆಗತಾನೆ ಕೆಲವು ವಾರಗಳ ಹಿಂದೆ ಪರೀಕ್ಷಿಸಿದ್ದ ಅಣುಬಾಂಬನ್ನು ಜಪಾನಿನ ಮೇಲೆ ಪ್ರಯೋಗಿಸಲು ಅಮೇರಿಕ ನಿರ್ಧರಿಸಿತು. ಅದನ್ನು ಕೈಗೊಳ್ಳಲು ವಿಶೇಷ ಸಂಸ್ಥೆಯೊಂದು ಸ್ಥಾಪಿತವಾಯಿತು.

1945 ಆಗಸ್ಟ್, 6 ನೇ ದಿನಾಂಕ ಮುಂಜಾನೆ "ಬಿ-29 ಬಾಂಬರ್" ಎಂಬ ಮಿಲಿಟರ್ ವಿಮಾನ ಮಾರ್ಟಿಂನ್ಸ್ ಕೊಲ್ಲಿಯ ಟಿನಿಯನ್ ದ್ವೀಪದಿಂದ ಹೊರಟಿತು. ಹಿಂದೆ 54 ಬಾಂಬ್-ಸಂಸ್ಥೆಗಳಲ್ಲಿದ್ದ ಕರ್ನಲ್ ಟಿಬ್ಬೆಟ್ಸ್ ಎಂಬಾತ

ನಾಯಕನಾಗಿ ಆ ಬಾಂಬರನ್ನು ನಡೆಸಿದ. ಹಿಂದೆ 68 ಬಾಂಬಿಂಗ್ ಸಂಸ್ಥೆಗಳಲ್ಲಿದ್ದ ಕ್ಯಾಪ್ಟನ್ ಪಾರ್ಸಿನ್ಸ್ ಎಂಬಾತ ಫಿರಂಗಿ ಕಲೆಯಲ್ಲಿ ತಜ್ಞನಾಗಿದ್ದ. ಅದರಲ್ಲಿ ಒಯ್ದಿದ್ದ ಬಾಂಬು ಸಲಕರಣೆಗಳ ತೂಕ 10,000 ಪೌಂಡು, ಉದ್ದ 14 ಅಡಿ, ಅಡ್ಡಳತೆ 5 ಅಡಿ, ಯುದ್ಧದ ಇತಿಹಾಸದಲ್ಲಿ ಮೊಟ್ಟಮೊದಲು ಪ್ರಯೋಗಿಸಿದ ಅಣು ಬಾಂಬ್ ಇದೇ. ಅದನ್ನು ಸಂಬಾಳಿಸಲು ಯುಕ್ತ ಅನುಭವವಿರುವಂತೆ ಅದರ ನೌಕರ ಸಿಬ್ಬಂದಿಗೆ 10,000 ಪೌಂಡುಗಳ ನಕಲಿ ಬಾಂಬುಗಳನ್ನು ಹಿಡಿದುಕೊಂಡು ವಿಮಾನಗಳಿಂದ ಎಸೆಯುವಂತೆ ಅನೇಕ ತಿಂಗಳುಗಳಕಾಲ ತರಬೇತಿ ಮಾಡಿದ್ದರು. ಈ ವಿಮಾನ ಎಲ್ಲಿಗೆ, ಯಾತಕ್ಕೆ ಹೋಗುತ್ತಿತ್ತು, ಆ ಬಾಂಬಿನ ಉದ್ದೇಶಗಳೇನು ಎಂಬ ವಿಷಯಗಳು ಬಹು ಗುಪ್ತವಾಗಿದ್ದವು. ಪ್ರಧಾನ ಅಧಿಕಾರಿಗಳಿಗೆ ಹೊರತು ಮತ್ತಾರಿಗೂ ಗೊತ್ತೇ ಇರಲಿಲ್ಲ.

## ನಕಲಿಯಲ್ಲ

ನೂರಾರು ಮೈಲಿಗಳು ಹೋಗುವವರೆಗೂ ಎಲ್ಲರೂ ಲಘುವಾಗಿ ಸಂಭಾಷಿಸುತ್ತಾ ಕಾಲ ಕಳೆದರು. ಗಮ್ಯ ಸ್ಥಾನವು ಸಮೀಪಿಸಿದಾಗ ಮುಖಂಡನು "ಇಲ್ಲಿಂದ ಮುಂದೆ ನೀವೆಲ್ಲಾ ನಿಮ್ಮ ನಿಮ್ಮ ಸ್ಥಾನಗಳಲ್ಲಿರಬೇಕು, ನಾವು ಒಯ್ಯುತ್ತಿರುವುದು ನಿಜವಾದ ಅಟಂಬಾಂಬ್ ನಕಲಿಯಲ್ಲ" ಎಂದು ಕೂಗಿ ಹೇಳಿದರು. ತಕ್ಷಣ ಎಲ್ಲರೂ ತಮ್ಮ ತಮ್ಮ ಸ್ಥಳಗಳಿಗೆ ಓಡಿಹೋದರು, ನಿಪುಣ ಕ್ಯಾಪ್ಟನ್ ಪಾರ್ಸನ್ಸ್ ಬಾಂಬನ್ನು 25 ನಿಮಿಷಗಳಲ್ಲಿ ಜೋಡಿಸಿ ಸಿದ್ಧಪಡಿಸಿದ ಸ್ಥಳಪರೀಕ್ಷೆ ಹವಾಮಾನ ಪರೀಕ್ಷೆಗಾಗಿ ಮೊದಲೇ ಹೋಗಿದ್ದ ವಿಮಾನ, ಜಪಾನಿನ ಮೇಲೆಲ್ಲಾ ದಟ್ಟ ಮೋಡಗಳು ಕವಿದಿದ್ದವೆಂದೂ ಒಂದು ಕಡೆ ಮಾತ್ರ ಮೋಡ ಹೆಚ್ಚಿಲ್ಲದೆ ಕೆಳಗೆ ಹಿರೋಷಿಮಾ ಪಟ್ಟಣದ ಸ್ಪಷ್ಟವಾದ ದೃಶ್ಯವನ್ನು ಕಂಡಿತೆಂದೂ "ಬಾಂಬರ್" ವಿಮಾನಕ್ಕೆ ಗುಪ್ತ ಸಂಕೇತದಲ್ಲಿ ರೇಡಿಯೋ ಸುದ್ದಿ ಕಳಿಸಿತು.

ಮೊದಲು ಬೇರೆ ಎರಡು ಪಟ್ಟಣಗಳ ಚುನಾವಣೆಯಾಗಿತ್ತು. ಅವೆರಡೂ ತಪ್ಪಿಸಿಕೊಂಡವು. ದುರ್ದೈವದ ಲೋಹಕಾಂತವು ಪೃಥ್ವಿಯ ಇತಿಹಾಸದಲ್ಲಿ ಎರಡೂ ಮರೆಯಲಾಗದ ಆಹುತಿಗೆ ಹಿರೋಷಿಮಾ ಪಟ್ಟಣವನ್ನು ಸೆಳೆಯಿತು. 'ಬಾಂಬರ್' ಓಟಾ ನದಿಯ ಮುಖ್ಯ ಸೇತುವೆಯ ಕೇಂದ್ರದ ಮೇಲೆ ಬಂದಾಗ, ಬಾಂಬನ್ನು ಅದಕ್ಕೆ ಗುರಿ ಇಟ್ಟು ಎಸೆದರು. ಎಲ್ಲರೂ ಕಣ್ಣಿಗೆ ಬಣ್ಣದ ಗಾಗಲ್‌ಗಳನ್ನು ಧರಿಸಿ ಹೊರಗೆ ಇಣಿಕಿ ನೋಡಿದರು. 10, 000 ಪೌಂಡ್ ಭಾರ ವಿಮಾನದಿಂದ ಹೊರಟು ಹೋಗಲು, ವಿಮಾನವು ಕೂಡಲೇ ಒಂದು ಮುಗ್ಗುಲಿಗೆ ಹೊರಳಿ, ಎಲ್ಲರನ್ನೂ ಬಲವಾಗಿ ಅದುರಿಸಿತು. ವಿಮಾನ ಚಾಲಕನು ಅದನ್ನು ಆತೋಟಿಗೆ ತಂದು, ಹಿಂತಿರಿಗಿಸಿ ಹಾರಿಸಿಕೊಂಡು ಹೊರಟೇ ಹೋದ.



## ಬಾಂಬಿನ ಪ್ರಭಾವ

ಕೆಳಗೆ ಹಿರೋಷಿಮಾದಲ್ಲಿ ಜನರು ಸಂತೋಷದಿಂದ ನಕ್ಕು ನಲಿಯುತ್ತಾ ಸಂತವಿಸುತ್ತಿದ್ದರು. ಮೇಲೆ ನೋಡಿದಾಗ, ವಿಜ್ಞಾನ ಸಂಶೋಧನೆಗಾಗಿ ಬಂದಿದ್ದ ಯಾವುದೋ ಶತ್ರು ವಿಮಾನ ಕೆಟ್ಟುಹೋಗಿ ಪ್ಯಾರಾಚೂಟ್‌ನಿಂದ ಧುಮುಕುತ್ತಿದ್ದಾರೆಂದು ಭಾವಿಸಿದರು. ಆದರೆ ವಿಧಿವಿಲಾಸದ ವಿಚಿತ್ರ ಬೇರೆ ರೀತಿಯಿತ್ತು. ಅಣು ಬಾಂಬ್ 43 ಸೆಕೆಂಡುಗಳಲ್ಲಿ ಸ್ಫೋಟಿಸಿತು. ಬೃಹದಾಕಾರದ ಒಂದು ಬೆಂಕಿಯ ಗುಂಡು ಅನೇಕ ಸೂರ್ಯರ ಪ್ರಕಾಶಕ್ಕಿಂತ ಹೆಚ್ಚಾಗಿ ಚಮಕಿಸಿತು. ಬೆಂಕಿಯ ಚೆಂಡು ಮೂರು ಫರ್ಲಾಂಗ್‌ನಷ್ಟು ಅಗಲವಾಯಿತು, ಕಣ್ಣು ಕುಕ್ಕುವ ಕಿಡಿ ಹಾರಿಸುವ, ಮಿಂಚಿನಂಥ ಹಳದಿ ಜ್ವಾಲೆ ಭುಗಿಲಿಟ್ಟು ಸ್ಫುರಿಸಿತು, ನಾನಾ ಬಣ್ಣಗಳಾದವು. ಬಿಳುಪು ಗುಲಾಬಿ ಬಣ್ಣಕ್ಕೆ ತಿರುಗಿ, ಅನಂತರ ನೀಲಿ ಬಣ್ಣವಾಯಿತು. ಉಷ್ಣತಾಮಾನ ಕೇಂದ್ರದಲ್ಲಿ ಹತ್ತು ಕೋಟಿ ಡಿಗ್ರಿಯಾಗಿತ್ತು. ಭೂಮಿ ಉಗ್ರವಾಗಿ ನಡುಗಿತು. ಗುಡುಗಿನಂತೆ ಭೋರ್ಗರೆಯುವ ಗರ್ಜನೆಯಾಯಿತು. ಕಟ್ಟಡಗಳು ಸೀಳುವ ಶಬ್ದದಿಂದ ಕೆಳಗುರುಳಿದವು. ಜನರ ಮೂಗುಗಳಿಂದ ಗಾಜಿನ ಚೂರುಗಳು ಹಾರಿಹೋದವು. ಅವರ ಕಾಲುಗಳಲ್ಲಿದ್ದ ಜೋಡುಗಳು ಓಡಿಹೋದವು. ನೀರಿನ ಸುಳಿಯಂತೆ ಗರಗರನೆ ತಿರುಗುವ ಹೊಗೆ ಧೂಳಿನ ಮೋಡಗಳನ್ನು ಮೇಲಕ್ಕೆಸೆಯಿತು.

ದಟ್ಟವಾದ, ಬಿಳೀ ಮೋಡ ಅಳಿಂಬೆ, ನಾಯಿ ಕೊಡೆಗಳ ಆಕಾರದಲ್ಲಿ ವೇಗವಾಗಿ ಮೇಲಕ್ಕೆದ್ದು ಇಡೀ ಪಟ್ಟಣವನ್ನು ಕವಿಯಿತು. ಒಂದು ನಿಮಿಷದೊಳಗಾಗಿ ಪಟ್ಟಣದ ಹತ್ತರಲ್ಲಿ ಒಂಬತ್ತು ಭಾಗದಲ್ಲಿ ಕುದಿಯುತ್ತಿರುವ ಧೂಮಸ್ತೋಮ ತುಂಬಿಕೊಂಡಿತ್ತು. ಮನೆಗಳು ಎಲ್ಲಾ ಕಡೆಗಳಿಂದಲೂ ಉರಿಯತೊಡಗಿದವು. ಏಕಕಾಲದಲ್ಲಿ ಸಾವಿರಾರು ಪ್ರದೇಶಗಳಿಂದ ಅಗ್ನಿ ಜ್ವಾಲೆ ಉಜ್ವಲ ಪ್ರಕಾಶದಿಂದ ಧಗಧಗಿಸಿತು. ಷಾರ್ಟ್ ಸರ್ಕ್ಯೂಟ್, ಬಿದ್ದುಹೋದ ಸ್ಟವ್‌ಗಳು, ಸೀಮೆ ಎಣ್ಣೆ ದೀಪ ಕೊಳವಿಗಳೊಡೆದು ಹೊರಟ ಗ್ಯಾಸ್‌ನ ಉರಿ ಮುಂತಾದವುಗಳಿಂದ ಪ್ರಚಂಡ ವಿಲಕ್ಷಣ ದಳ್ಳುರಿ, ಚಂಡಮಾರುತ. ತೀವ ಆಕಾಶಕ್ಕೆ ಹೋಗಿ ಹೆಪ್ಪುಗಟ್ಟಿ ಗೋಲಿಗಾತ್ರದ ಹನಿಗಳಾಗಿ ಬೀಳತೊಡಗಿತು.

## ಜನರ ಗೋಳಾಟ ಹೆಣಗಾಟ

ಕಟ್ಟಡಗಳೊಳಗಿದ್ದ ಜನರು ಪ್ರಾಣ ಉಳಿಸಿಕೊಳ್ಳಲು ಹೊರಬರಲೂ ಅವಕಾಶವಾಗಲಿಲ್ಲ. ಗೋಡೆಗಳೂ, ಛಾವಣಿಗಳೂ ಕುಸಿಮ ಜನರು ಸಿಕ್ಕಿಕೊಂಡು ಉರಿಯಲ್ಲ ಭಸ್ಮವಾದರು, ಅಗ್ನಿಶಾಮಕ ದಳ, ಆಸ್ಪತ್ರೆಗಳು, ಜರೂರು ಇಲಾಖೆಗಳು ನಾಶವಾದವು. ರೇಡಿಯೋ ಸ್ಟೇಷನ್ ಉರಿದಿತ್ತು. ಟೆಲಿಫೋನ್, ಟೆಲಿಗ್ರಾಫ್ ವ್ಯವಸ್ಥೆ ಮುರಿಯಿತು. ಭಗ್ನಾವಶೇಷಗಳಲ್ಲಿ ಹುದುಗಿದ್ದವರೂ, ಗಾಯಗೊಂಡವರೂ ಸಹಾಯಕ್ಕೆ ಚೀರಿಕೊಂಡರು.

ಊರಿನ 150 ಮಂದಿ ವೈದ್ಯರಲ್ಲಿ ಬಹಳ ಜನ ಮಡಿದಿದ್ದರು, ಅಥವಾ ಗಾಯಗೊಂಡಿದ್ದರು, 1780 ನರ್ಸ್‌ಗಳಲ್ಲಿ 1658 ಮಂದಿಸತ್ತಿದ್ದರು, ಅಥವಾ ಗಾಯದಲ್ಲಿದ್ದರು. ಬದುಕಿದ ವೈದ್ಯರಿಗೆ ಬ್ಯಾಂಡೇಜ್, ಮರ್‌ಕ್ಯೂರೋಕ್ರೋಂ ಹೊರ್ತು ಇನ್ನೇನೂ ಉಳಿದಿರಲಿಲ್ಲ. ಅನೇಕರು ಅರಳು ಹುರಿ ದಂತೆ ಹುರಿಯಲ್ಪಟ್ಟರು. ಚರ್ಮವು ಮಾಂಸದಿಂದ ಟಿಸ್ಯೂಕಾಗದದಂತೆ ಜೋಲಾಡುತ್ತಿತ್ತು. ಬರೆಹಾಕಿದ ಕಪ್ಪಾದ ಅಂಗಗಳಿಂದ ಒಂದು ಬಗೆ ರಸ ತೊಟ್ಟಿಕ್ಕುತ್ತಿತ್ತು. ಕೆಲವೆಡೆ ಶಾಖ ಎಷ್ಟು ತೀವ್ರವಾಗಿತ್ತೆಂದರೆ, ಅದು ಜನರನ್ನು ಸುಮ್ಮನೇ ಸುಡಲಿಲ್ಲ. ತಕ್ಷಣ ಆವಿಯನ್ನಾಗಿ ಮಾಡಿತು. ಪಟ್ಟಣದ ಒಂದು ಭಾಗದಲ್ಲಿ ಹೋಗುತ್ತಿದ್ದ ಜನಜಂಗುಳಿಯಲ್ಲಿ ನೂರಾರು ಜನರ ಸುಳುವುಕೂಡ ಸಿಕ್ಕಲಿಲ್ಲ. ಸೂರ್ಯನಿಗಿಂತ ಉಗ್ರ ಶಾಖ ಅವರನ್ನು ಅದೃಶ್ಯರಾಗುವಂತೆ ಮಾಡಿತು. ಅನೇಕರು ಪ್ರೇತಗಳಂತೆ ಉರಿದು ಹೋದರು. ದಾಹ ತೀರಿಸಿಕೊಳ್ಳಲು ನದಿಗಳ ನೀರನ್ನು ಕುಡಿದ ಮೂವತ್ತು ಜನರು ಅಣು ಸೋಂಕಿನಿಂದ ಸೆಟೆದುಕೊಂಡು ವಾಂತಿಮಾಡಿದರು.

ಸ್ಫೋಟನದ ಕೇಂದ್ರದಲ್ಲಿದ್ದ ಜನರು ಆದಷ್ಟು ದೂರ ಓಡಿಹೋಗುವ ಹಂಬಲದಲ್ಲಿ ತಮ್ಮ ಸುಟ್ಟ ಗಾಯವನ್ನೂ ನೋಡದೆ ಪಲಾಯನ ಮಾಡಲು ಪ್ರಯಾಸಪಟ್ಟರು—ಅದನ್ನು ನೋಡಲೂ ಮರೆತರು, ತಲೆ, ಶರೀರಗಳಿಂದ ರಕ್ತ ಸುರಿಯುತ್ತಿದ್ದರೂ, ಸೀದುಹೋಗಿ ಕಪ್ಪಾಗಿದ್ದ ಚರ್ಮದ ಮೇಲೆ ರಕ್ತಸ್ನಾನ ಮಾಡಿದ್ದವರೂ ಮರ, ಕಲ್ಲು, ಉಕ್ಕು, ಎಲ್ಲೆಲ್ಲೂ ಬಿದಿದ್ದ ಶವಗಳ ಮೇಲೆ ಕುಂಟುತ್ತಾ ತಮ್ಮ ಶರೀರವನ್ನು ಎಳೆದುಕೊಂಡು ಹೋದರು. ಒಬ್ಬ ಸೈನಿಕನು ಒಂದು ಅಡಿ ಉದ್ದದ ಬೊಂಬಿನ ಸಿರ್ಬೆಯು ಅವನ ಒಂದು ಕಣ್ಣಿಗೆ ಚುಚ್ಚಿಕೊಂಡು ಮುಂದಕ್ಕೆ ಚಾಚಿದ್ದರೂ ಅದರೊಡನೆ ಓಡುತ್ತಿದ್ದ ಬಾಯಿಯಿಂದ ಕಿವಿಯವರೆಗೆ ಮುಖವು ಹರಿದು ಹೋಗಿ ತೆರೆದುಕೊಂಡಿದ್ದ ಒಬ್ಬ ಸ್ತ್ರೀ ಹಾಗೆಯೇ ತನ್ನ ಕೈಲಾದಷ್ಟು ವೇಗವಾಗಿ ಹೋದಳು. ಬಾಯಿ ತೆರೆದಂತೆ ಕಾಣಿಸುತ್ತಿದ್ದ ತಲೆಯೊಡನೆ ಒಬ್ಬನು ಹೇಗೋ ಯಾಂತ್ರಿಕವಾಗಿ ದಿಕ್ಕೆಟ್ಟು ನಡೆದುಕೊಂಡು ಹೋದ. ಪಲಾಯಿತರಲ್ಲಿ ಕೆಲವರಿಗೆ ಮುಖ್ಯ ಶರೀರದ ಒಂದು ಪಕ್ಕ ಮಾತ್ರ ಕಪ್ಪಗೆ ಸುಟ್ಟು ಇನ್ನೊಂದು ಪಕ್ಕ ಸರಿಯಾಗಿತ್ತು. ಒಬ್ಬ ಸೇವಕನ ಮುಖ ಬೇರೆ ಬೇರೆ ಎರಡು ರೂಪಗಳಾದವು. ಸ್ಫೋಟನದ ಕಡೆಗೆ ತಿರುಗಿದ್ದ ಅವನ ಮುಖಭಾವ ಸುಟ್ಟು ಕಪ್ಪಾಗಿ ಬರೆ ಹಾಕಿದಂತಿತ್ತು. ಇನ್ನೊಂದುಭಾಗ ಸರಿಯಾಗಿ ನುಣ್ಣಗಿತ್ತು.

ಅಂಥ ಸಾರ್ವತ್ರಿಕ ದುರ್ದಶೆಗಳ ಮಧ್ಯದಲ್ಲೂ ಮನುಷ್ಯ ಮಮತೆ, ಕನಿಕರವನ್ನು ಆಟಂಬಾಂಬು ಸಂಪೂರ್ಣವಾಗಿ ಕೊಂದಿರಲಿಲ್ಲ. ಕುಂಟುತ್ತಾ, ಸೆಳೆಯುತ್ತಾ ಹೋಗುತ್ತಿದ್ದವರಲ್ಲಿ ಇತರ ನಿರ್ಭಾಗ್ಯರನ್ನು ಒಯ್ಯುತ್ತಿದ್ದವರೂ ಇದ್ದರು. ಗಾಯಪಟ್ಟವರು ತಮಗಿಂತಲೂ ಹೆಚ್ಚು ವೇದನೆಯಲ್ಲಿದ್ದವರನ್ನು ಬೆನ್ನ ಮೇಲೆ ಒಯ್ದರು. ಜನರು ತಾವೆಲ್ಲಿದ್ದೇವೆಂದು ಅರಿತಿದ್ದರೂ, ಮರುಕ್ಷಣ ತಮ್ಮ ನೆಲೆಯನ್ನು ಪೂರ್ತಿಯಾಗಿ



ಮರೆತರು, ಎಲ್ಲವೂ ನೆಲಮಟ್ಟ ಉರುಳಿಹೋಗಿದ್ದುದರಿಂದ ತಮ್ಮ ಸ್ಥಾನ ಗೊತ್ತಾಗಲಿಲ್ಲ. ದಿಗ್ಭ್ರಮೆಯಾಯಿತು. ಅನೇಕ ಸ್ಥಳಗಳಲ್ಲಿ ನೂರಾರು ಮಂದಿ ಒಂದು ದಿಕ್ಕಿನಲ್ಲೂ, ಇನ್ನು ನೂರಾರು ಮಂದಿ ಎದುರು ದಿಕ್ಕಿನಲ್ಲೂ ಗೊತ್ತುಗುರಿಯಿಲ್ಲದೆ ಹೋಗುತ್ತಿದ್ದರು, ಒಂದು ಗುಂಪು ಸುರಕ್ಷಿತ ಸ್ಥಳಕ್ಕೆ ಹೋದರೆ, ಇನ್ನೊಂದು ಗುಂಪು ಮೃತ್ಯು ಜ್ವಾಲೆಗಳ ಕಡೆಗೆ ತಮ್ಮ ನೆಲೆಗಳ ಅರಿವಿಲ್ಲದೆ, ಅವಶೇಷಗಳಿಂದ ಹೇಗೋ ಬಿಡುಗಡೆ ಮಾಡಿಕೊಂಡು ಹೋದವರಲ್ಲಿ ಅನೇಕರು ಸೇತುವೆಯ ಕಡೆ ಹೋದರು.

ಸ್ಫೋಟನದ ದೆಬ್ಬೆಯಿಂದ ಶಕ್ತಿಗುಂದಿದ್ದ ಆ ಸೇತುವೆಯು ಅಷ್ಟು ಜನರ ಭಾರಕ್ಕೆ ಕುಸಿಯಲು, ಎಲ್ಲರೂ ಕೆಳಗಿದ್ದ ನದಿಯೊಳಕ್ಕೆ ಬಿದ್ದು ಅನೇಕರು ಮುಳುಗಿ ಹೋದರು. ಬೇರೆ ಸ್ಥಳಗಳ ಇತರ ಸೇತುವೆಗಳ ಮೇಲೆ ಹೋದ ಜನರ ನುಗ್ಗಾಟದಲ್ಲಿ ಕಟಕಟೆಗಳು ಬಿದ್ದು ಸಾವಿರಾರು ಮಂದಿ ನದಿಯೊಳಗೆ ಬಿದ್ದು ಸತ್ತರು. ಇನ್ನೂ ಅನೇಕರು ಶಾಖ ತಟ್ಟುತ್ತಿದ್ದ ಜ್ವಾಲೆಗಳಿಂದ ಪಾರಾಗಲು ನದಿಯಲ್ಲಿ ಆಶ್ರಯ ಪಡೆದಿದ್ದರು. ಆದರೆ ವಾಯು ಹೆಚ್ಚು ಹೆಚ್ಚು ಬಿಸಿಯಾಗುತ್ತಾ, ಬಿಸಿ ಗಾಳಿ ಸ್ಫೋಟನದ ಕೇಂದ್ರಕ್ಕೆ ಹೊಡೆದು, ನದಿಗಳಲ್ಲಿ ಭೀಕರ ಅಲೆಗಳು ಎದ್ದು ಅನೇಕ ಮಂದಿ ಮುಳುಗಿ ಹೋದರು.

ಕಾವು ಒಂದೇ ಸೆಕೆಂಡ್ ಇದ್ದರೂ ಎಷ್ಟು ತೀಕ್ಷ್ಣವಾಗಿತ್ತೆಂದರೆ ಅದು ಉಕ್ಕಿನ ಭಾರಿ ಭಾರಿ ದಿಮ್ಮಿಗಳನ್ನು ಬಗ್ಗಿಸಿ, ಮುರಿದು ತಿರುವಿ, ಡೊಂಕು ಮಾಡಿತು. ಗಾಜೂ ಚಾವಣಿಯ ಹೆಂಚುಗಳೂ ಕರಗಿ ಅಗ್ನಿ ಪ್ರವಾಹದಂತೆ ಹರಿದವು. ಅತ್ತ ಇತ್ತ ಎರಡು ದಿಕ್ಕುಗಳಲ್ಲೂ ಎರಡು ಮೈಲಿ ದೂರದವರೆಗೂ ನೆಟ್ಟಿದ್ದ ಟೆಲಿಫೋನ್ ಕಂಬಗಳನ್ನೆಲ್ಲಾ ಕಾವು ಇದ್ದಲಿನಂತೆ ಸೀಯಿಸಿತು, ಹತ್ತು ಮೈಲಿ ಆಚೆ ತೋಟದಲ್ಲಿ ನಿಂತಿದ್ದ ಮನುಷ್ಯರ ಮುಖದ ಮೇಲೂ ಈ ಶಾಖ ಬಡಿಯುತ್ತಿತ್ತು. ಐದು ಚದುರ ಮೈಲಿಗಳಿಗಿಂತಲೂ ಹೆಚ್ಚು ವಿಸ್ತೀರ್ಣದಲ್ಲಿ ಯಾವ ವಸ್ತುವೂ ನೆಟ್ಟಗೆ ನಿಂತಿರಲಿಲ್ಲ. ಪ್ರತಿಯೊಂದು ಕಟ್ಟಡವೂ ನಾಶವಾಗಿತ್ತು. ಕಾಸ್ಮಿಕ್ ಕಿರಣಗಳ ಶಕ್ತಿಯ ಪ್ರಚಂಡ ಏಟು ಬಿದ್ದಂತೆ ಹಿರೋಷಿಮಾ ಪಟ್ಟಣವೆಲ್ಲಾ ನೆಲಸಮವಾಗಿ ಬಿದ್ದು ಭಗ್ನಾವಶೇಷಗಳ ಕುಪ್ಪೆಗಳಲ್ಲಿ ಎರಡು ಲಕ್ಷ ಜನರು ಹುದುಗಿಹೋಗಿದ್ದರು.

ಹಿರಾನೋ ಎಂಬ ಸೇನಾಧಿಕಾರಿ ಬಾಂಬಿನಿಂದ ನಾಶವಾದ ಈ ಪಟ್ಟಣವನ್ನು ವೀಕ್ಷಿಸಲು ಹೋಗಿದ್ದ. ಮೈಲಿ ಮೈಲಿ ದೂರ ಹರಡಿಹೋಗಿದ್ದ ಬೀಳು ಭೂಮಿಯ ಮೇಲೆ ಒಂದು ರಸ್ತೆ ಇರಲಿಲ್ಲ. ರಸ್ತೆಗಳೆಲ್ಲಾ ಏಕಾಏಕಿ ಕುಸಿದು ಹೋಗಿದ್ದವು. ಪೃಥ್ವಿಯ ದ್ವಿತೀಯ ಮಹಾಯುದ್ಧದಲ್ಲಿ ಬಾಂಬುಗಳಿಂದ ನಾಶವಾದ ಅನೇಕ ಊರುಗಳನ್ನು ನೋಡಿ ಅದು ಅವನಿಗೆ ರೂಢಿಯಾಗಿತ್ತು. ಆದರೆ ಮಾನವ ಯುದ್ಧದಲ್ಲಿ, ಹಿಂದೆಂದೂ ಇತಿಹಾಸದಲ್ಲಿ ಕಾಣದ ದೃಶ್ಯವನ್ನು ಅವನು ಇಲ್ಲಿ ನೋಡಿ ಬೆರಗಾದ.

ಒಂದೇ ಒಂದು ಬಾಂಬಿನಿಂದ 78,150 ಜನರು ಮಡಿದರು, 13,953 ಮಂದಿ ನಾಪತ್ತೆಯಾದರು, 90,000 ಮನೆಗಳು ನಾಶವಾದವು.

ಆ ದಿನ ಮಧ್ಯಾಹ್ನ ದುರಸ್ತಿನ ಕೆಲಸ ಪ್ರಾರಂಭವಾಯಿತು. ನೌಕಯಾನಾದಲ್ಲಿ ನಿರ್ಭಾಗ್ಯ ಜನರು ಸಾಲುಸಾಲಾಗಿ ಬಾಯ್ದೆರೆದು ನಿಂತರು. ತಿನ್ನಲು ಅನ್ನದ ಉಂಡೆಗಳನ್ನು ಅವು ಮುಗಿಯುವವರೆಗೂ ಹಂಚಿದರು. ಆದರೆ ಯಾವ ಪರಿಹಾರವೂ ಪಟ್ಟಣದ ಹೊರವಲಯಗಳಲ್ಲಿ ಮಾತ್ರ ದೊರೆಯುತ್ತಿತ್ತು. ಗಾಯಪಟ್ಟವರೂ, ವೇದನೆಯಿಂದ ನರಳುತ್ತಿದ್ದವರೂ ಎರಡು ಮೈಲಿಗಿಂತ ಹೆಚ್ಚು ದೂರ ನಡೆದುಕೊಂಡು ಬಹು ಶ್ರಮದಿಂದ ಹೋಗಬೇಕಾಗಿತ್ತು. ಅದಕ್ಕೆ ಅನೇಕ ಗಂಟೆಗಳ ಕಾಲ ಬೇಕಾಯಿತು. ಸಂಜೆ ಆರು ಗಂಟೆಗೆ ಗಾಯಾಳುಗಳನ್ನು ಇತರ ರೋಗಿಗಳನ್ನೂ ಎಲ್ಲೆಲ್ಲಿ ಆಸ್ಪತ್ರೆಗಳಿದ್ದವೋ ಅಲ್ಲಿಗೆ ಪಟ್ಟಣದ ಉಪನಗರಗಳಿಂದ ಒಯ್ಯಲು ವಾಹನಗಳು ಸಿದ್ಧವಾದವು. ಅವರೆಲ್ಲಾ ಕೋಯ್ ಎಂಬ ರೈಲು ನಿಲ್ದಾಣಕ್ಕೆ ಹೋಗಿ ಗಾಯಾಳುಗಳಿಂದ ತುಂಬಿಹೋಗಿದ್ದ ರೈಲು ಗಾಡಿಗಳಲ್ಲಿ ನಿಂತುಕೊಂಡು ನರಳುತ್ತಾ ಹೋದರು. ರಾತ್ರಿ ಹತ್ತು ಗಂಟೆಗೆ ರೈಲು ಒಟಾಕೆ ಎಂಬ ಊರನ್ನು ತಲುಪಿತು. ಕೊನೆಗೆ ಅಲ್ಲಿ ಗಾಯಗಳನ್ನು ನಿಧಾನವಾಗಿ ಹೊಲಿದು, ಸುಟ್ಟ ಗಾಯಗಳನ್ನು ತೊಳೆದರು. ಅವರ ಸಹಾಯಕ್ಕೆ ನೆಂಟರಿಷ್ಟರು ಅವರನ್ನು ನೋಡಲು ಬಂದರು. ಆದರೆ ಎಲ್ಲವೂ ಆ ರಾತ್ರಿಯಲ್ಲಿ ದುಃಸ್ವಪ್ನದಂತಿತ್ತು. ಏಕೆಂದರೆ ಪೆಟ್ಟುಬಿದ್ದವರೂ, ಸುಟ್ಟುಕೊಂಡವರೂ ಎಷ್ಟು ಕುರೂಪಿಗಳಾಗಿದ್ದರೆಂದರೆ ಯಾರಿಗೂ ಅವರನ್ನು ಗುರುತಿಸಲಾಗಲಿಲ್ಲ. ಅವರ ಹೆಸರುಗಳನ್ನು ಹಿಡಿದು ಕೂಗಬೇಕಾಯಿತು.

ಆ ರಾತ್ರಿ ಹಿರೋಷಿಮಾದಲ್ಲಿ ಬಹು ದಪ್ಪ ಹನಿಗಳ ಮಳೆ ಸುಂಟರಗಾಳಿಯೊಡನೆ ಬಿತ್ತು. ಮಳೆ ನಿಂತಮೇಲೂ ಕೂಡ ಪಟ್ಟಣದ ಭಾಗಗಳು ಉರಿಯುತ್ತಲೇ ಇದ್ದವು. ಎರಡು ಹಗಲು, ಎರಡು ರಾತ್ರಿ ಅನೇಕ ಗಯಾಳುಗಳು ಚಿಕಿತ್ಸೆಯಿಲ್ಲದೆ ಅಲ್ಲಿಯೇ ನರಳುತ್ತಾ ಬಿದ್ದುಕೊಂಡಿದ್ದರು. ಗಾಯಗಳು ಕೊಳೆತು ಮೈಕೈಗಳು ಊದಿಕೊಂಡವು, ಮನುಷ್ಯ ಮಾಂಸ ಸುಟ್ಟ ದುರ್ವಾಸನೆಯೂ, ಕೊಳೆತ ಶವಗಳ ದುರ್ಗಂದವೂ ಹರಡಿಕೊಂಡಿದ್ದವು, ಮೂರು ದಿನಗಳ ನಂತರ ನಾಗಸಾಕಿ ಎಂಬ ರೇವು ಪಟ್ಟಣದಲ್ಲೂ ಅಣುಬಾಂಬು ಬಿದ್ದು ಅಲ್ಲಿಯೂ ಅಪಾರ ಅನಾಹುತಗಳಾದವು, ಒಂದು ನಿಮಿಷದಲ್ಲಿ 40,000 ಜನರು ಮಡಿದರು, ಎರಡು ಚದರ ಮೈಲಿ ವಿಸ್ತೀರ್ಣ ಜಾಗ ಸಂಪೂರ್ಣವಾಗಿ ನಾಶವಾಯಿತು.

ಅಣುಸ್ಫೋಟನದ ನೇರವಾದ ಪ್ರಸಾರಕ್ಕೆ ಸಿಕ್ಕಿಕೊಂಡಿದ್ದವರು ಕಳೆದ ಎರಡು ದಶಕಗಳಲ್ಲಿ ಲ್ಯೂಕೋಮಿಯಾ ಎಲುಬು ಮತ್ತು ಇಂದ್ರಿಯಗಳ ಏಡಿಹುಣ್ಣು, ಸೆರಿಬ್ರಲ್ ಹೆಮರೇಜ್, ಗೂರಲು, ವ್ರಣಗಳು, ಅಕಾಲ ವೃದ್ಧಾಪ್ಯಗಳಿಂದ ಮಡಿದರು.



ಎರಡು ಪಟ್ಟಣಗಳಲ್ಲೂ ಒಟ್ಟು ಎರಡು ಲಕ್ಷ ಜನರು ಬಾಂಬಿನಿಂದ ಸತ್ತರು. ಅನೇಕರು ಕುಂಟರೂ, ಕರಾಳ ರೂಪಿಗಳೂ ಆದರು. ಒಂದು ಲಕ್ಷ ಜನರು ಅಣುಜ್ವಾಲೆ ಕಿರಣಗಳ ಪ್ರಸಾರದಿಂದ ಪೂರ್ತಿ ಅಶಕ್ತರಾಗಿ, ಹಿಬಾಕುಷಾ ರೋಗಿಗಳಾಗಿ ಹಿರೋಷಿಮಾದಲ್ಲೇ ಬಿಡಲ್ಪಟ್ಟರು. ಈ ಬೇನೆಯವರು ಜಪಾನಿನಲ್ಲೆಲ್ಲಾ ಹರಡಿಕೊಂಡಿದ್ದಾರೆ. ಅವರಲ್ಲಿ ಅರ್ಧ ಸಂಖ್ಯೆ ನಾಗಸಾಕಿಯಲ್ಲಿ ನೆಲಸಿದೆ. ಎರಡು ಲಕ್ಷ ಸಂಖ್ಯೆಯ ಈ ನಿರ್ಬಲ ರೋಗಿಗಳು ಪದೇಪದೇ ಉದ್ರೇಕಗಳು, ಶಿರೋಭ್ರಮಣೆ, ಉಗ್ರ ಹೃದಯ ಸ್ಫುರಣ, ಸ್ಮೃತಿಶಕ್ತಿಯ ಹಾನಿ ಮತ್ತು ಹಸಿವೆಯ ಕೊರತೆಗಳಿಗೆ ಗುರಿಯಾಗಿದ್ದಾರೆ. ಆ ರೋಗಿಗಳು ಅಸ್ಥಿಪಂಜರದಂತೆ ಕಾಣುತ್ತಾರೆ. ಅಣುಕಿರಣ ಪ್ರಸಾರದ ಕಳಂಕದಿಂದ ತಮಗೆ ವಿಕಟಾಕೃತಿಯ ಸಂತಾನೋತ್ಪತ್ತಿಯಾಗುವುದೆಂದು ಭೀತಿ ಸದಾ ಅವರನ್ನು ಪೀಡಿಸುವುದರಿಂದ ಅವರು ಮದುವೆಯಾದಾಗಲೇ ಪೀಳಿಗೆ ಬೆಳೆಯದಂತೆ ತಾವೇ ಒಪ್ಪಿಕೊಂಡು ಶಸ್ತ್ರಚಿಕಿತ್ಸೆ ಮಾಡಿಸಿಕೊಳ್ಳುತ್ತಾರೆ. ಸಾರ್ವಜನಿಕ ಸ್ನಾನಗೃಹಗಳು ಅವರಿಗೆ ನಿಷೇಧ, ಅವರೊಡನೆ ಜನರು ಆಕಸ್ಮಿಕ ನೈಮಿತ್ತಿಕ ಸಂಪರ್ಕಗಳನ್ನು ಕೂಡ ವರ್ಜಿಸುತ್ತಾರೆ.

ಮೂರು ತಿಂಗಳ ನಂತರ ಹಿರೋಷಿಮಕ್ಕೆ ಪುನರ್ಜೀವ ತುಂಬಿತು. ಫೀನಿಕ್ಸ್ ಎಂಬ ಪಕ್ಷಿ ತನ್ನನ್ನೇ ತಾನು ಸುಟ್ಟುಕೊಂಡು ಆ ಬೂದಿಯಿಂದ ಪುನಃ ಹುಟ್ಟಿ ಏಳುತ್ತದೆಂಬ ಐತಿಹ್ಯವಿದೆ. ಅದರಂತೆ ಹಿರೋಷಿಮವೂ ತನ್ನ ಬೂದಿಯಿಂದ ಮೇಲೆದ್ದು ಹೊಸ ಹಿರೋಷಿಮ ಸೃಷ್ಟಿಯಾಯಿತು. ಪೂರ್ವದಷ್ಟೇ ಜನಸಂಖ್ಯೆ ಬಂದಿದೆ, ಆ ಪಟ್ಟಣವನ್ನು ಅಂತರರಾಷ್ಟ್ರಿಯ ಶಾಂತಿ ಪುಣ್ಯಕ್ಷೇತ್ರವನ್ನಾಗಿ ಭಾವಿಸಬೇಕೆಂದು ಜನಾಂಗವು ನಿರ್ಧರಿಸಿತು. ನಾಗಸಾಕಿ ಅಂತರರಾಷ್ಟ್ರೀಯ ಸಂಸ್ಕೃತಿ ಕ್ಷೇತ್ರವೆಂದು ಭಾವಿಸಲ್ಪಟ್ಟಿದೆ. ಅಲ್ಲಿ ಆರು ಅಂತಸ್ತಿನ ಅಂತರರಾಷ್ಟ್ರೀಯ ಸಂಸ್ಕೃತಿ ಭವನ ಮತ್ತು ಬುದ್ಧನಂತೆ ಕಣ್ಣು ಮುಚ್ಚಿಕೊಂಡು, ಮೃತರ ಶಾಂತಿಗಾಗಿ ಧ್ಯಾನಿಸುತ್ತಿರುವ 32ಅಡಿ ಎತ್ತರದ ಕಂಚಿನ ಶಾಂತಿ ವಿಗ್ರಹ ನಿರ್ಮಿತವಾಗಿದೆ. ಹಿರೋಷಿಮಾದಲ್ಲಿ ಪ್ರತಿ ವರ್ಷವೂ ಆಗಸ್ಟ್ ಆರನೇ ತಾರೀಕು ಶಾಂತಿ ಹಬ್ಬದ ಸಮಾರಂಭವು ಆಚರಣೆಯಲ್ಲಿದೆ.

ಆಟಂಬಾಂಬಿಗಿಂತಲೂ ಉಗ್ರ ಶಕ್ತಿ ಇರುವುದು ಹೈಡ್ರೋಜನ್ ಬಾಂಬ್ ಎಂಬುದು. ನವೆಂಬರ್ 1, 1952ರಲ್ಲಿ ಅದನ್ನು ಶಾಂತಸಾಗರದ ಎನಿವೆಟಾಕ್ ದ್ವೀಪದ ಬಳಿ ಸ್ಫೋಟಿಸಿದಾಗ ಅದು ಇಡೀ ದ್ವೀಪವನ್ನು ಕರಗಿಸಿತು, ಮತ್ತು ಅದನ್ನೆಲ್ಲಾ ನೀರು ಕುದಿಯುವಂತೆ ಕುದಿಸಿತು.



# ಕಾವ್ಯವಾಹಿನಿ

## ಉತ್ಸವ

—ಎನ್. ಎಸ್. ಅಶ್ವತ್ಥಲಕ್ಷಮ್ಮ

ಉತ್ಸವವ ಮಾಡುವೆವು
ನಾವೆಲ್ಲ ಕೂಡಿ
ರಾಜ್ಯೋತ್ಸವ
ರಜತೋತ್ಸವ ॥

ಚೆಲುವ ಚೆನ್ನಿಗನಿರುವ
ಕನ್ನಡದ ನೆಲದಲ್ಲಿ
ತಲೆವಾಗಿ ತೆನೆದೂಗ್ವ
ಕಳವೆಯಾ ಕಣದಲ್ಲಿ ॥

ತೆಂಗು ಕಂಗಿನ ಸಾಲು
ಮಲ್ಲಿಗೆಯ ಬನದಲ್ಲಿ
ಇಂಪು ಕಂಪನು ಬೀರ್ವ
ಗಂಧದಾ ತಾಣದಲಿ ॥

ಶಿಲ್ಪಕ್ಕೆ ಹೆಸರಾದ
ಗೀತಕ್ಕೆ ನೆಲೆಯಾದ
ವೀಣೆಯಾ ಬೀಡಾದ
ವೈಣಿಕರ ನಾಡಿನಲಿ ॥

ಬಸವ ಪುರಂದರ,
ಶಂಕರಾ ಮಾಧ್ವ
ವಿಜಯ ವಿದ್ಯಾರಣ್ಯ
ವಾಗ್ದೇವಿ ಬೀಡಿನಲಿ ॥

ಪೆಸರಾದಪುಲಿಕೇಶಿ
ವಿಷ್ಣುವರ್ಧನರಾಳ್ದ
ಹುಕ್ಕ ಬುಕ್ಕರು ಸೇರಿ
ಯದುವಂಶ ನಾಡಿನಲಿ ॥

ಅದ್ವೈತ ಸಿದ್ಧಾಂತ
ವೇದಾಂತ ಉದ್ದೇಶ
ಆಚಾರ್ಯರುಪದೇಶ
ಸಾಹಿತ್ಯ ಬೀಡಿವಿನಲಿ ॥

ಕಿತ್ತೂರು ಚೆನ್ನಮ್ಮ
ದುರ್ಗದಾ ಓಬವ್ವೆ
ಸಾಹಸದ ನಾಯಕರು
ನೆಲೆಸಿದ್ದ ನಾಡಿನಲಿ ॥

ಸಾಹಿತ್ಯ ಸವಿಯಲ್ಲಿ
ಸಂಗೀತ ಸುಧೆಯಲ್ಲಿ
ಜನಮನವತಣಿಸುವಾ
ಸಂಸ್ಕೃತಿಯ ಬೀಡಿನಲಿ ॥

ಭಾವನೆಯ ಬಂಧುಗಳು
ಅಕ್ಕಯರೆ ಭಗಿನಿಯರು
ಸುಜ್ಞಾನ ಸೊಡರ್ಬೆಚ್ಚಿ
ವಿಜ್ಞಾನ ಬೆಳಕಿನಲಿ ॥

ಉತ್ಸವವ ಮಾಡುವೆವು...........



# ಶೃಂಗಾರ ಪುಷ್ಪಗಳ ಹೊಸ ತಳಿಗಳು

— ಐ. ಸಿ. ಎ. ಆರ್.

ಬೆಂಗಳೂರಿನ ಭಾರತೀಯ ತೋಟಗಾರಿಕಾ ಸಂಶೋಧನಾ ಸಂಸ್ಥೆಯು ನಾಲ್ಕು ಹೊಸ ಶೃಂಗಾರ ಪುಷ್ಪಗಳನ್ನು ಇತ್ತೀಚೆಗೆ ಬಿಡುಗಡೆ ಮಾಡಿದೆ. ಕೇಂದ್ರ ಕೃಷಿ ಮಂತ್ರಿಗಳು ಇವನ್ನು ಬಿಡುಗಡೆ ಮಾಡಿದರು.

ಗ್ಲೇಡಿಯೋಲಸ್, ಸೇವಂತಿಗೆ ಹಾಗೂ ಕ್ರೋಟಾನ್ ಪುಷ್ಪಗಳ ಜಾತಿಯ ಈ ಹೊಸ ತಳಿಗಳು ಅತ್ಯಂತ ಆಕರ್ಷಕವಾಗಿವೆ. ಇವು ಕುಂಡ, ಪಾತಿಗಳಲ್ಲಿ ಬೆಳೆಯಲು ಹೇಳಿ ಮಾಡಿಸಿದಂಥ ತಳಿಗಳು. ಶೃಂಗಾರ ಪ್ರಿಯರು ಈ ಹೊಸ ತಳಿಗಳ ಲಾಭ ಪಡೆಯಬಹುದು. ಇವನ್ನು ವಾಣಿಜ್ಯ ಶ್ರೇಣಿಯಲ್ಲೂ ಬೆಳೆಸಬಹುದಾಗಿದೆ.

ಗ್ಲೇಡಿಯೋಲಸ್‌ನ 'ಆರತಿ' ಮತ್ತು 'ಶೋಭಾ' ತಳಿಗಳಂತೂ ಒತ್ತಾಗಿ ಹೂಬಿಟ್ಟು, ಆಕರ್ಷಕ ಬಣ್ಣಗಳನ್ನು ಹೊತ್ತು ಬಹುದಿನಗಳವರೆಗೆ ಹೂದಾನಿಗಳಲ್ಲಿ ಕಳಕಳಿಯಿಂದ ಇರಬಲ್ಲವು.

೧) ಆರತಿ : ಇದು 'ಶೈರ್ಲೀ' ಮತ್ತು 'ಮೆಲಡಿ' ತಳಿಗಳಿಂದ ರೂಪಿಸಿದ
ಹೈಬ್ರಿಡ್ ತಳಿ; ೭೦-೭೫ ದಿನಗಳಲ್ಲಿ ಹೂವಿಗೆ ಬರುವ ಮಧ್ಯಮಾವಧಿ ತಳಿ. ೬೦-
೭೦ ಸೆಂ. ಮೀ. ಉದ್ದದ ಆಕರ್ಷಕ ತೆನೆಗಳಲ್ಲಿ ಕಿತ್ತಳೆಗೆಂಪು ಚುಕ್ಕೆಗಳು ಮತ್ತು
ಕೆನ್ನೀಲಿ ಹಾಗೂ ಹಳದಿ ಪಟ್ಟಿಗಳುಳ್ಳ ಕಡುಗೆಂಪಿನ ಪುಷ್ಪಗಳು ಕಂಗೊಳಿಸುತ್ತವೆ.
೧೦-೧೧ ಸೆಂ. ಮೀ. ವ್ಯಾಸದ ೧೦-೧೨ ಹೂಗಳು ಪ್ರತಿ ತೆನೆಗೂ ಬರುತ್ತವೆ.

ಈ ತಳಿಯ ಮತ್ತೊಂದು ವಿಶೇಷತೆಯೆಂದರೆ ಇದು ರೋಗನಿರೋಧಕ ಶಕ್ತಿ ಹೊಂದಿದೆ.

'ವೈಲ್ಡ್ ರೋಸ್' ತಳಿಯಿಂದ ರೂಪಿಸಿದ ತಳಿ. ಇದು
೨) ಶೋಭೆ : ಸುಮಾರು ೯೦-೧೦೦
೫೦-೫೫ ದಿನಗಳಲ್ಲಿ ಹೂವಿಗೆ ಬರುವ ಅಲ್ಪಕಾಲಾವಧಿ ತಳಿ.
ಸೆಂ. ಮಿ. ಉದ್ದದ ತೆನೆಗಳಲ್ಲಿ ೧೦-೧೧ ಸೆಂ. ಮೀ. ವ್ಯಾಸ ಪುಷ್ಪ (ಬಟ್ಟಲು)ಗಳು
ಬಿಡುತ್ತವೆ. ಪ್ರತಿ ತೆನೆಗೆ ೧೬-೧೮ ಪುಷ್ಪಗಳು ಬಿಡುತ್ತವೆ. ಶಂಖದಂಥ ಕಂದು

ಬಣ್ಣದ ಆರು ಹೂಗಳು ಒಮ್ಮೆಗೆ ಅರಳಿದಾಗ ಪುಷ್ಪದಳದ ಒಳಭಾಗ ಹಳದಿ ಬಣ್ಣದಿಂದ ಕಂಗೊಳಿಸುತ್ತದೆ. ಈ ಹೂಗಳನ್ನು ಒಂದು ವಾರದವರೆಗೆ ಹೂದಾನಿಯಲ್ಲಿ ಇಡಬಹುದು. ಈ ಜಾತಿಯ ಗಿಡಗಳನ್ನು ಚೆನ್ನಾಗಿ ಸಂತಾನಾಭಿವೃದ್ಧಿ ಮಾಡಬಹುದು.

೩) ಇಂದಿರಾ: 'ಲಾರ್ಡ್ ಡೂನೆರ್ಕ್ಸ್' ಮತ್ತು 'ಫ್ಲಿರ್ಟ್ ವಾಲೆಂಟೈನ್' ತಳಿಗಳಿಂದ ರೂಪಿಸಿದ ಸೇವಂತಿಗೆ ಹೂವಿನ ತಳಿ, ಇದು ಸೇವಂತಿಗೆಯ ಇತ್ತೀಚಿನ ಅತ್ಯುತ್ತಮ ತಳಿ.

೬–೭ ಸೆಂ. ಮೀ. ವ್ಯಾಸದ ಹಳದಿ ಬಣ್ಣದ ಹೂಗಳು ಪ್ರತಿ ಗಿಡಕ್ಕೆ ಸುಮಾರು ೫೦ ಬಿಡುತ್ತವೆ. ಈ ಹೂಗಳು ಹೂ ಮಾಲೆಗೆ ಹೇಳಿ ಮಾಡಿಸಿದಂಥವು. ಇದನ್ನು ಸುಲಭವಾಗಿ ಸಂತಾನಾಭಿವೃದ್ಧಿ ಮಾಡಬಹುದು. ಇವು ಕುಂಡ ಹಾಗೂ ಪಾತಿಗಳಲ್ಲಿ ಹೆಚ್ಚು ಆಕರ್ಷಕವಾಗಿ ಕಾಣುತ್ತವೆ.

೪) ಸಂಜಯ್ : 'ಕಾಮೆಟ್' ಮತ್ತು 'ಗೋಲ್ಡ್ ಶೀವ್ಸ್' ತಳಿಗಳಿಂದ ರೂಪಿಸಿದ ಹೈಬ್ರಿಡ್ ಕ್ರೋಟಾನ್ ತಳಿ. ಇದು ಮಧ್ಯಮ ಗಾತ್ರದ ಎಲೆಗಳುಳ್ಳ ಸುಮಾರಾಗಿ ಬೆಳೆಯುವ ಗಿಡ. ಎಲೆಗಳ ಅಂಚು ತೆರೆ-ತೆರೆಯಾಗಿರುತ್ತದೆ. ಎಳೆಯ ಎಲೆಗಳು ಕಡು ಹಸಿರಾಗಿ ಬಲಿತ ಮೇಲೆ ಕಡುಗೆಂಪು ಬಣ್ಣಕ್ಕೆ ತಿರುಗುತ್ತವೆ. ಎಳೆಯ ಎಲೆಗಳಲ್ಲಿ ಹಳದಿ ಚುಕ್ಕೆಗಳು ಆಕರ್ಷಕವಾಗಿ ಕಾಣುತ್ತವೆ. ಕ್ರೋಟಾನ್ ಪ್ರಿಯರ ಕಣ್ಣಿಗಂತೂ ಈ ಗಿಡ ಹಬ್ಬವಿದ್ದಂತೆ.

ಸೌಂದರ್ಯವನ್ನು ಸವಿಯುವ ಕಣ್ಣುಗಳಿಗೆ ಈ ಮೇಲೆ ತಿಳಿಸಿದ ನಾಲ್ಕು ಹೂಗಳೂ ರಸದೌತಣ ನೀಡುತ್ತವೆ; ಮನವನ್ನು ತಣಿಸುತ್ತವೆ. ಜೀವನಕ್ಕೆ ಹೊಸ ಹುರುಪು ನೀಡುತ್ತವೆ.

ಹಸಿರು ಹೊನ್ನನ್ನು ಆಧುನಿಕ ಜೀವನ ಕಸಿದುಕೊಳ್ಳುತ್ತಿರುವ ಈ ಕಾಲದಲ್ಲಿ ಬರೀ ಇಟ್ಟಿಗೆ-ಸಿಮೆಂಟ್‌ನ ಕಳೆಗುಂದಿದ ವಾತಾವರಣವನ್ನೇ ನೋಡಿ-ನೋಡಿ ಬೇಸತ್ತ ಕಣ್ಣುಗಳಿಗೆ ಇಂಥ ಹೊಸ ತಳಿಗಳ ಆಗಮನ ಪ್ರಶಂಸನೀಯ. ಇವನ್ನು ಕುಂಡಗಳಲ್ಲಿ, ಪಾತಿಗಳಲ್ಲಿ, ಮನೆಯ ಮೇಲಿನ ಮೇಲ್ಛಾವಣಿಯ ಮೇಲೆ, ಬಾಲ್ಕನಿಗಳಲ್ಲಿ ಸೊಗಸಾಗಿ ಬೆಳೆಸಬಹುದು. ಕೃತಕ ಕಟ್ಟಡಗಳಿಗೆ ಜೀವಂತ ಪುಷ್ಪಗಳು ಹೆಚ್ಚು ಅರ್ಥ ನೀಡಬಲ್ಲವು. ಆದರೆ ಸವಿಯುವ ಕಣ್ಣುಗಳಿಗೆ ಮಾತ್ರ ಅನುಭವಿಸುವ ಮನಸ್ಸಿದ್ದರೆ ಮಾತ್ರ.



# ಮರಳಿ ಬಂದ ಸೌಭಾಗ್ಯ

—ಶ್ರೀಮತಿ ಬಿ. ಎನ್. ಜಯಾಶಂಕರ್

ಇಲ್ಲಿಯವರೆಗೆ........................

ಮೈಸೂರಿನ ಚಂದ್ರಪ್ಪನವರ ಮಗ ಮೋಹನ್ ರಾಷ್ಟ್ರಕ್ಕಾಗಿ ವೀರಮರಣವನ್ನಪ್ಪಿದನು. ಮಗನ ಜೀವನದ ಭವಿಷ್ಯವನ್ನರಿತಿದ್ದ ಸಾತ್ವಿಕ ಜೀವಿ ಚಂದ್ರಪ್ಪನವರು ಸೊಸೆಯ ಬಾಳಿನ ನಿರ್ವಹಣೆಗೆ ಆಸ್ತಿಯ ಆಸರೆಯನ್ನು ಮಾಡಿದರು. ಪತಿ ಮತ್ತು ಮಾವನವರ ಸಾವು ಉಷೆಗೆ ಸಿಡಿಲಿನ ಆಘಾತವನ್ನೇ ತಂದಿತು. ದಾಂಪತ್ಯ ಜೀವನದ ರಸನಿಮಿಷಗಳು ಉಷೆಯ ಬಾಳಿಗೆ ವಿಷಗಳಿಗೆಯಾಗಿ ಪರಿಣಮಿಸಿದನ್ನು ಕಂಡ ಸುಧೀರ್ ತತ್ತರಿಸಿದ. ತನ್ನ ದುಃಖದಲ್ಲಿ ಭಾಗಿಯಾದ ಸ್ನೇಹಿತ ವಿಜಯನನ್ನು ಅಭಿನಂದಿಸಿದ ಸುಧೀರ್. ಉಷೆಯು ಮಾವನವರ ಆದರ್ಶತೆಯನ್ನು ಕಂಡು ಅಭಿನಂದಿಸಿದಳು. ಅಣ್ಣನ ಖರ್ಚಿಗೆಂದು ಸ್ವಲ್ಪ ಹಣವನ್ನು ಉಳಿಸಿಕೊಂಡು ತನ್ನ ಆಸ್ತಿಯೆಲ್ಲವನ್ನೂ ಅನಾಥ ಮಕ್ಕಳ ಅಭಿವೃದ್ಧಿಗಾಗಿ ದಾನಧರ್ಮ ಮಾಡಿದಳು. ಇದ್ದ ಮನೆಯಲ್ಲೇ ಇದ್ದರೆ ತನ್ನ ಪತಿಯ ನೆನಪಿನಿಂದ ದುಃಖ ಉಮ್ಮಳಿಸುವುದನ್ನು ತಿಳಿದು ಮನೆಯನ್ನು ವಿದ್ಯಾರ್ಥಿನಿಲಯವನ್ನಾಗಿ ಮಾಡಿ ಉಷೆಯು ಮನೆಯನ್ನು ಖಾಲಿಮಾಡಲು ಸಿದ್ಧವಾದಳು........

ಅಂದು ಶಾಲೆಯಿಂದ ಬಂದ ಸುಧೀರ್ ತಂಗಿಗೆ ಹೇಳಿದ, 'ನನಗೆ ಇಲ್ಲಿಂದ ಬೆಂಗಳೂರಿಗೆ ವರ್ಗವಾಗಿದೆ. ಅದೂ ಒಳ್ಳೆಯದೇ ಆಯಿತು ನಿನ್ನ ವ್ಯಾಸಂಗಕ್ಕೂ ಅನುಕೂಲ. ಈ ವಿಷಯವನ್ನು ವಿಜಯನಿಗೆ ತಿಳಿಸುವೆ ಎಂದು ಉಷೆಗೆ ಹೇಳಿದ.

ಸುಧೀರನ ಪತ್ರ ನೋಡಿ ವಿಜಯನಿಗೆ ಸಂತೋಷವಾಯಿತು. ಮಹಾರಾಣಿ ಕಾಲೇಜಿಗೆ ಸಮೀಪದಲ್ಲಿ ಒಂದು ಮನೆಯನ್ನು ಹುಡುಕಬೇಕೆಂದು ಸೂಚಿಸಿದ್ದ. ಒಬ್ಬ ಬ್ರೋಕರನ್ನು ಸಂಧಿಸಿ, ವಿಜಯ ಇದ್ದುದರಲ್ಲಿ ಒಂದು ಮನೆಯನ್ನು ಗೊತ್ತುಮಾಡಿದ.

ಸುಧೀರನಿಗೆ ಮನೆಯ ವಿಷಯವಾಗಿ ಪತ್ರ ಬರೆದ. ಅಡ್ವಾನ್ಸ್ 1000 ರೂಗಳು, ಮನೆ ಬಾಡಿಗೆ 125 ರೂ. ಆಗುತ್ತದೆ, ತಕ್ಕಮಟ್ಟಿಗೆ ಅನುಕೂಲವಾಗಿದೆ, ಬಂದು ನೋಡಿ, ಸರಿಹೋದರೆ ಬರುವ ಏರ್ಪಾಡು ಮಾಡೋಣ ಎಂದು ತಿಳಿಸಿದ್ದ. ಪತ್ರ

ನೋಡಿದ ಕೂಡಲೆ ಬೆಂಗಳೂರಿಗೆ ಬಂದು ಮನೆಯನ್ನು ನೋಡಿ ಒಪ್ಪಿಗೆ ಸೂಚಿಸಿದ್ದ ಸುಧೀರ್. ಚಿಕ್ಕದಾದರೂ ಮನೆ ಚೊಕ್ಕವಾಗಿತ್ತು. 1000 ರೂಗಳನ್ನು ಮುಂಗಡವಾಗಿ ಕೊಟ್ಟು, ರಸೀತಿ ಪಡೆದುಕೊಂಡರು. 15 ದಿನಗಳಲ್ಲಿ ಶಿವಮೊಗ್ಗದಲ್ಲಿದ್ದ ಮನೆಯನ್ನು ಬಾಡಿಗೆಗೆ ಕೊಟ್ಟು ಬೆಂಗಳೂರಿಗೆ ಹೊರಟು ಬಂದರು.

ಉಷಾ ಕಾಲೇಜಿಗೆ ಸೇರಿದಳು, ಯಾರಿಗೂ ಅವಳು ವಿಧವೆಯೆಂದು ತಿಳಿದಿರಲಿಲ್ಲ. ಅವಳಿಗಿಂತಲೂ ದೊಡ್ಡವರು ಅನೇಕ ಮಂದಿ ಇದ್ದರು. ಕೆಲವು ಹುಡುಗಿಯರು, ಅಬ್ಬಾ, 'ಆ ಹುಡುಗೀನ ನೋಡ್ರೇ, ಹಣೆಗೆ ಕುಂಕುಮ ಇಡದೆ ಇರುವುದೂ ಒಂದು ಫ್ಯಾಶನ್ ಎಂದು ತಿಳಿದಿದ್ದಾಳೆ, ಅದಕ್ಕೇ ನಮ್ಮ ಸಂಸ್ಕೃತಿ ಈ ಮಟ್ಟಕ್ಕೆ ಇಳಿದಿರುವುದು ಎಂದು ಟೀಕಿಸುತ್ತಿದ್ದರು. ಆದರೆ ದಿವಸಕಳೆದಂತೆ ಅವಳ ಗಂಭೀರ ಸ್ವಭಾವ, ಸರಳತೆ, ಶಿಸ್ತು, ಜಂಭವಿಲ್ಲದ ಮಾತು, ಪಾಠದಲ್ಲಿ ಆಸಕ್ತಿ, ಅವರನ್ನೂ ಉಷಳೆಡೆಗೆ ಅಯಸ್ಕಾಂತದಂತೆ ಸೆಳೆಯುತ್ತಿತ್ತು. ಅವರೇ ಅವಳ ಗೆಳೆತನವನ್ನು ಬಯಸಿ ಬಂದರು. ಉಷಾ ಎಲ್ಲರನ್ನೂ ಸಮಾನತೆಯಿಂದ ಕಾಣುತ್ತಿದ್ದಳು.

ಸಮಯಸಿಕ್ಕಾಗ ವಿಜಯ ಮತ್ತು ಶೇಖರ ಸುಧೀರನ ಮನೆಗೆ ಬರುತ್ತಿದ್ದರು. ಭಾನುವಾರ ಮಾತ್ರ ಸ್ನಾನ-ಊಟಕ್ಕೆ ತಮ್ಮ ಮನೆಗೇ ಬರಬೇಕೆಂದು ಗೆಳೆಯನ ಆದರಪೂರ್ವಕ ಒತ್ತಾಯದಿಂದ ತಪ್ಪಿಸಿಕೊಳ್ಳಲು ಸಾಧ್ಯವಿರಲಿಲ್ಲ. ಬಿಡುವಿನ ದಿನಗಳಲ್ಲಿ ಲೈಬ್ರರಿಗೆ ಹೋಗಿ ಮಹಾಪುರುಷರ ಜೀವನ ಚರಿತ್ರೆಗಳನ್ನು ಓದುವುದೆಂದರೆ ಶೇಖರನಿಗೆ ಬಹಳ ಇಷ್ಟ. ಆ ಭಾನುವಾರ ಸುಧೀರನ ಮನೆಗೆ ನಿಧಾನವಾಗಿ ಹೋದರಾಯಿತು, ಎಂದುಕೊಂಡು ಲೈಬ್ರರಿಗೆ ಹೊರಟ.

ಶ್ರೀ ರಾಮಕೃಷ್ಣರ 'ಮಹಾಸಮಾಧಿ' ಎಂಬ ಪುಸ್ತಕವನ್ನು ಏಕಾಗ್ರತೆಯಿಂದ ಓದತೊಡಗಿದ. ಅದರಲ್ಲಿ ಶಾರದಾದೇವಿಯವರು ಪತಿಯು ನಿಧನರಾದ ನಂತರ, ಕುಂಕುಮ ಧರಿಸುವುದನ್ನು ಬಿಡುತ್ತಾರೆ. ಕನಸಿನಲ್ಲಿ ರಾಮಕೃಷ್ಣರು ಬಂದು ಅದನ್ನು ಖಂಡಿಸುತ್ತಾರೆ, 'ನಾನು ಸತ್ತರೂ ನನ್ನ ಆತ್ಮ ಸಾಯುವುದೇ, ನೀನು ಈ ವಿಧವೆಯ ವೇಷದಲ್ಲಿರುವುದನ್ನು ನಾನು ಸಹಿಸಲಾರೆ', ಎಂದು ವಾದಿಸುತ್ತಾರೆ. ಆದರೆ ಸಮಾಜದ ಭಯ ಶಾರದಾದೇವಿಯವರಿಗೆ. ಅದಕ್ಕೋಸ್ಕರ ನಮ್ಮ ಆತ್ಮವನ್ನು ಘಾಸಿಗೊಳಿಸುವುದೇ, ಹುಟ್ಟನಿಂದಲೇ ಹೆಣ್ಣು ಸುಮಂಗಲಿಯಾಗಿ ಬಂದವಳು. ಅದೂ ದೈವಸಂಕಲ್ಪ, ಪತಿಯನಂತರ ಅವುಗಳನ್ನು ಧರಿಸಲು ಸತಿ ಅಪವಿತ್ರಳೇ? ಆತ್ಮಕ್ಕೆ ಎಂದೂ ಸಾವಿಲ್ಲ, ನೀನು ಧರಿಸಲೇ ಬೇಕು ಎಂದು ಹೇಳಿ ಒಪ್ಪುವಂತೆ ಮಾಡಿದರು.

ಅದನ್ನು ಓದಿದ ಶೇಖರನಿಗೆ ಉಷೆಯ ಮುಖ ನೆನಪಿಗೆ ಬಂತು. ಮದುವೆಯ ದಿನ ಹಣೆಯಲ್ಲಿ ಕುಂಕುಮವಿಟ್ಟು ಹರಿಸಿನ ಬಳಿದು ಮುಡಿಯತುಂಬ ಹೂ ಮುಡಿದು



ಬಳೆಗಳ ಝಣತ್ಕಾರದಿಂದ ನೋಡುವವರ ಕಣ್ಣಿಗೆ ಸಂತಸವನ್ನುಂಟು ಮಾಡುತ್ತಾ ಕಂಗೊಳಿಸುತ್ತಿದ್ದ ಉಷೆ, ಈಗ ವಿರಾಗಿಣಿಯಂತೆ ಹಾಳು ಹಣೆ, ಬೋಳು ಕುತ್ತಿಗೆ, ಎಣ್ಣೆ ಕಾಣದ ತಲೆ, ನೋಡಿದರೆ ಮನ ಮಿಡಿಯುತ್ತಿತ್ತು. ಶೇಖರನಿಗೆ ಆ ಬಗ್ಗೆ ಎಷ್ಟು ಯೋಚಿಸಿದರೂ ದಾರಿ ತೋರುತ್ತಿರಲಿಲ್ಲ. ಇಂದು ಅವನ ಸಮಸ್ಯೆ ಸುಲಭವಾಗಿ ಬಗೆಹರಿದಿತ್ತು.

ಕೂಡಲೇ ಎದ್ದು ರೂಮಿಗೆ ಹೋದ, ಹೊಸನಾಣ್ಯ ಸಿಕ್ಕಿದಾಗಲೆಲ್ಲಾ ಒಂದು ಡಬ್ಬಿಯಲ್ಲಿ ಹಾಕಿಡುತ್ತಿದ್ದ. ಈಗ ಅದನ್ನೆಲ್ಲಾ ಕೂಡಿಸಿ ನೋಡಿದ, ಐದು ಚಿಲ್ಲರೆ ಹಣವಿತ್ತು. ಇಂದು ಹೇಗೂ ಭಾನುವಾರ, ಅಣ್ಣನೂ ಅಲ್ಲಿಗೆ ಹೋಗಿರುತ್ತಾನೆ, ಎಂದುಕೊಂಡು ಸ್ಟೇಷನರಿ ಅಂಗಡಿಗೆ ಹೋಗಿ ಅರಿಶಿನ ಕುಂಕುಮ ಇದ್ದ ಒಂದು ಟಾಯ್ಲೆಟ್ ಬಾಕ್ಸನ್ನು ಖರೀದಿ ಮಾಡಿದ. ಉಳಿದ ಹಣಕ್ಕೆ ಮಲ್ಲಿಗೆದಂಡೆಯನ್ನು ಕೊಂಡು ತಾನು ಓದಿದ ಪುಸ್ತಕ ಕೈಯಲ್ಲಿ ಹಿಡಿದು ಸರಸರನೆ ಹೆಜ್ಜೆ ಹಾಕುತ್ತಾ ಉಷಳ ಮನೆಗೆ ಬಂದ. ಮನಸ್ಸು ಆವೇಶಗೊಂಡಿತ್ತು.

ಸುಧೀರ್ ಮತ್ತು ವಿಜಯ ಆಗತಾನೇ ತಿಂಡಿತಿನ್ನಲು ತೊಡಗಿದ್ದರು. ಒಳಗೆ ಬಂದ ಶೇಖರ್ ತಾನು ತಂದಿದ್ದ ಟಾಯ್ಲೆಟ್ ಬಾಕ್ಸ್ ಮತ್ತು ಮಲ್ಲಿಗೆ ಹೂವಿನ ದಂಡೆಯನ್ನು ಮೇಜಿನ ಮೇಲಿಟ್ಟ. ಅದರ ಪರಿಮಳ ಕೊಠಡಿಯಲ್ಲಾ ತುಂಬಿತು. ಇದೇ ನಪ್ಪಾ ಎಂದೂ ಇಲ್ಲದ ಇವನ ಕಾರ್ಯಕ್ರಮ, ಎಲ್ಲಾದರೂ ಹೊರಟಿರುವನೋ? ಎಂದುಕೊಂಡ ವಿಜಯ ಬಂದಕೂಡಲೆ ಹರಳುಹುರಿದಂತೆ ಮಾತನಾಡುತ್ತಿದ್ದ ಶೇಖರ ಇಂದು ಮೌನಿಯಾಗಿದ್ದ ಅವನ ನಡತೆ ಇಬ್ಬರಿಗೂ ಆಶ್ಚರ್ಯವಾಗಿತ್ತು. ತಂಗಿಯನ್ನು ಕರೆದು ತಿಂಡಿಕೊಡಲು ಹೇಳಿದ, ತಂದಿಟ್ಟಳು ಉಷೆ. ತಿಂಡಿತಿನ್ನದೆ ಸುಮ್ಮನೆ ಕುಳಿತಿದ್ದ ಶೇಖರನನ್ನು ಕಂಡು ಅವಳಿಗೆ ನಗು ಬಂತು.

'ಏನು ರಾಯರು ಗಹನವಾದ ಚಿಂತೆ ಮಾಡುವಂತಿದೆ ಮೊದಲು ತಿಂಡಿಮುಗಿಸು, ಆಮೇಲೆ ನಿನ್ನ ಚಿಂತೆಯನ್ನು ಮುಂದುವರಿಸಬಹುದು,' ಎಂದಳು. ಟೇಬಲ್ ಮೇಲಿದ್ದ ಮಲ್ಲಿಗೆ ದಂಡೆ ತನ್ನನ್ನು ಅಣಕಿಸುತ್ತಾ, ಕುಳಿತಂತೆ ಕಾಣುತ್ತಿತ್ತು. ಅದರ ಪರಿಮಳ ಅವಳ ಹೃದಯವನ್ನು ಭೇದಿಸಿತು. ಚಿಕ್ಕಂದಿನಿಂದಲೂ ಮಲ್ಲಿಗೆ ಹೂವೆಂದರೆ ಅವಳಿಗೆ ಬಹಳ ಆಸೆ. ಅವಳ ನಿಡಿದಾದ ಕೂದಲನ್ನು ಬಾಚಿ, ಹೂಕಟ್ಟಿ ಮುಡಿಗೇರಿಸುವುದೆಂದರೆ ಅವಳಿಗೆ ಹೆಮ್ಮೆ. ತನ್ನ ಪತಿಯು ಒಂದು ದಿನವೂ ತಪ್ಪದೆ ಮೈಸೂರು ಮಲ್ಲಿಗೆಯ ದಂಡೆಯನ್ನು ತಂದು ತಾನೇ ಮುಡಿಸಿ ಕೂದಲನ್ನೂ ಎಳೆದು ಹಿಂಸೆಪಡಿಸುತ್ತಿದ್ದ. ಇಂದು ಆ ಭಾಗ್ಯ ತನಗಿಲ್ಲವೆಂದು ತಿಳಿದಾಗ ಮನಸ್ಸು ಮುದುಡಿತು. ತಲೆಬಾಗಿಸಿ ಮಾತನಾಡದೆ ಒಳಗೆ ಹೊರಟಳು.

ಶೇಖರ ತಾನು ತಂದಿದ್ದ ಪುಸ್ತಕವನ್ನು ಅಣ್ಣನ ಕೈಗಿತ್ತು ಹೇಳಿದ, "ಈ ಪುಸ್ತಕವನ್ನು ಓದಿ ನಿಮ್ಮ ಅಭಿಪ್ರಾಯವನ್ನು ತಿಳಿಸಿರಿ" ಎಂದ. ಗೆಳೆಯರಿಬ್ಬರೂ ಅದರಲ್ಲಿದ್ದ ವಿಷಯವನ್ನು ಓದಿದರು. ಯೋಚನೆಗೆ ಒಳಗಾದರು. ಅನೇಕ ವೇಳೆ ಈ ವಿಷಯ ಅವರ ಮನಸ್ಸಿಗೆ ಹೊಳೆದಿದ್ದರೂ ಉಷಳ ಬಳಿ ನೇರವಾಗಿ ಮಾತನಾಡಲು ಹಿಂಜರಿಯುತ್ತಿದ್ದರು. ಈ ದಿನ ಅದರ ಬಗ್ಗೆ ಮಾತನಾಡುವ ಸಮಯ ಒದಗಿತ್ತು. ಶೇಖರನ ಕಡೆ ತಿರುಗಿ ಸುಧೀರ ಹೇಳಿದ, ಉಷಾ ಒಪ್ಪಿದರೆ ನಮ್ಮ ಅಭ್ಯಂತರವಿಲ್ಲ, ಒಪ್ಪಿಸುವ ಭಾರ ನಿನ್ನದು, ಒಪ್ಪಿದಲ್ಲಿ ನಮಗೂ ಸಂತೋಷವೇ ಎಂದರು.

ತಿಂಡಿಯ ತಟ್ಟೆಯನ್ನೂ ಹಿಡಿದು ಕೊಂಡು ಒಳಗೆ ಹೋದ ಶೇಖರ ಉಷೆ ಮಂಕಾಗಿ ಕುಳಿತಿದ್ದಳು. ಯಾಕಪ್ಪ, ಶೇಖರ ಹೀಗಿರುವೆ ತಿಂಡಿ ತಿನ್ನಲಿಲ್ಲವಲ್ಲ, ಮೈಸರಿಯಿಲ್ಲವೆ ? ಎಂದು ವಾತ್ಸಲ್ಯದಿಂದ ಕೇಳಿದಳು. ಕೆಲವು ಬಾರಿ ಅಣ್ಣನಿಗೆ ತಿಳಿಯದಂತೆ ಸಿನಿಮಾನೋಡಲು ಉಷಳ ಬಳಿ ಹಣಪಡೆದು ಹೋಗಿದ್ದ; ಅದನ್ನು ಜ್ಞಾಪಿಸಿಕೊಂಡು, ಹಣವೇನಾದರೂ ಬೇಕಿತ್ತೇ! ಎಂದಳು. ಅಕ್ಕಾ ಇದು ಮಹತ್ವದ ವಿಷಯ, ಹಗುರವಾಗಿ ಎಣಿಸಬೇಡ, ನಾನು ತಿಂಡಿ ತಿನ್ನಬೇಕಾದರೆ, ನನ್ನ ಚಿಂತೆ ನೀನೇ ಬಗೆಹರಿಸಬೇಕು ; ಎಂದ ಶೇಖರ್

"ಮೊದಲು ವಿಷಯ ತಿಳಿಸು, ತಿಳಿಸದೆಯೇ ಹೀಗೇಕೆ ನನ್ನನ್ನ ಗೋಳಾಡಿಸುವೆ" ಎಂದು ಪ್ರಶ್ನಿಸಿದಳು. ಶೇಖರ್ ಉಷಳ ಕೈಹಿಡಿದು ಬೇಡಿದ, ಅಕ್ಕಾ ನೀನು ಮತ್ತೆ ಸುಮಂಗಲಿಯಾಗಬೇಕು, ನಿನ್ನ ಕುಂಕುಮವಿಲ್ಲದ ಹಣೆ, ಹೂವಿಲ್ಲದ ಮುಡಿ, ನನಗೆ ನೋಡಲಾಗುವುದಿಲ್ಲ ನೀನು ಒಪ್ಪದಿದ್ದರೆ ನನಗೆ ಹುಚ್ಚು ಹಿಡಿಯುತ್ತದೆ ಇದಕ್ಕೆ ಅಣ್ಣಗಳ ಒಪ್ಪಿಗೆಯೂ ಇದೆ, ಸಮಾಜ ಇದಕ್ಕೆ ಒಪ್ಪದಿದ್ದರೆ ಚಿಂತೆಯಿಲ್ಲ, ಸ್ವಲ್ಪ ದಿನ ಆಡಿಕೊಳ್ಳುತ್ತಾರೆ, ನಂತರ ತೆಪ್ಪಗಾಗುತ್ತಾರೆ, ನೀನು ಯಾರಿಗೂ ಯಾವ ದ್ರೋಹವನ್ನೂ ಮಾಡುತ್ತಿಲ್ಲವಲ್ಲ, ಮಹಾತ್ಮರ ವಾಣಿಯೇ ಬೆಂಬಲ ಕೊಟ್ಟಿರುವಾಗ ನೀನೇಕೆ ಚಿಂತೆ ಮಾಡಬೇಕು, ಎಂದು ಹೇಳಿದ.

ಇಂದು ನೀನು ಕುಂಕುಮವಿಟ್ಟು ಹೂಮುಡಿದು ತಿಂಡಿಕೊಟ್ಟರೆ ಮಾತ್ರ ತಿನ್ನುವೆ, ಇಲ್ಲದಿದ್ದರೆ ಆಮರಣಾಂತ ಉಪವಾಸ ಮಾಡುತ್ತೇನೆ. ಇದು ಸತ್ಯ ನಿನ್ನನ್ನು ಹೀಗೆ ನೋಡಿ ಕೊರಗುವುದಕ್ಕಿಂತ, ಸಾಯುವುದೇ ಉತ್ತಮ ಎಂದು ಕಳಕಳಿಯಿಂದ ನುಡಿದ.

ವಿಜಯ ಮತ್ತು ಸುಧೀರನಿಗೂ ಸಮಾಧಾನವಾಗಿತ್ತು. ಅಂದು ಎಲ್ಲರೂ ಭಾವೋದ್ವೇಗದಿಂದ ಊಟ ಮುಗಿಸಿದರು. ಸಂಜೆ ತಮ್ಮ ರೂಮಿಗೆ, ಶೇಖರ್ ಮತ್ತು ವಿಜಯ ಹೊರಟರು.

(ಮುಂದುವರಿಯುವುದು)



# ನೋವಿನ ಬೆಲೆ

—ಡಿ॥ ದ. ರಾ. ಬೇಂದ್ರೆ

(26-10-81ರಂದು ಬೇಂದ್ರೆಯವರ ನಿಧನದಿಂದ ಕನ್ನಡ ಸಾರಸ್ವತ ಲೋಕದಲ್ಲಿ ಕಣ್ಣೀರಿನ ಕೋಡಿ ಹರಿಯಿತು ; ಪ್ರತಿಯೊರ್ವ ಕನ್ನಡಿಗನ ಹೃದಯಕ್ಕೆ ಕತ್ತಲು ಕವಿಯಿತು. ಕನ್ನಡ ಜನ ಹತ್ತಾರು ದಿನಗಳು ತಮ್ಮ ನೋವನ್ನು ಸಭೆಸೇರಿ ಸಂತಾಪ ಸೂಚಿಸಿ ವಿವಿಧ ಪತ್ರಿಕೆಗಳಲ್ಲಿ ಬರೆದು ಹಂಚಿಕೊಂಡು ಅನುಭವಿಸಿತು. ಅದೇನಿದ್ದರೂ ನಮ್ಮ ಎದೆಯ ನೋವು, ಆಥವಾ ದುಗುಡ, ಅಷ್ಟೇ ಅದೂ ಮಾಸುತ್ತಾ ಬರುವಂಥಾದ್ದು. ಕಾರಣ ; ಅದು ನೋವಾಗಿದ್ದರೂ ನೋವಿನ ಯಥಾರ್ಥ ಬೆಲೆ ನಮಗೆ ತಿಳಿಯದಿರುವುದು. ಹಾಗಾದರೆ ನೋವಿನ ಬೆಲೆ ಏನು ?....ಅದನ್ನು ಕವಿ ಭೀರುಂಡ ಬೇಂದ್ರೆಯವರ ಬರೆಹವನ್ನು ಓದಿ ತಿಳಿಯಬೇಕು.

—ಸಂ. ಕೋರಂಬ

ಏನಿರಬೇಕು ಏನಿರಬಾರದು ಎಂದು ತಿಳಿದುಕೊಳ್ಳುವುದು ಅರಿವು. ಏನಿದೆ ಏನಿಲ್ಲ ಎಂದು ತಿಳಿಯದಿರುವುದೆ ಮರೆವು. ಅರಿವು ದೇವರ ಅರುಹು, ಮರೆವು ಜೀವನ ಕುರುಹು. ಮರೆವು ಅರಿವಾದಾಗ ಜೀವ ದೇವನಾಗುವನು. ನೋವಿನ ನೆರವಿನಿಂದ ಮರೆವು ಅರಿವಾಗುವುದು. ನೋವಿರದಿದ್ದರೆ ಮರೆವಿನ ಅರಿವು ಕೂಡ ನಮಗಾಗುತ್ತಿರಲಿಲ್ಲ. ಪ್ರಾಣದ ಪರಿವೆಯಾದಾಗಲೇ ಜೀವಕ್ಕೆ ಮರೆವಿನ ಅರಿವಾಗುವುದು. ಅರಿವಿನ ಪರಿವಿಗೆ ಮರೆವಿನ ಪರಿವೆ ಎದುರಾಗುತ್ತಲೆ ನೋವು ಉಂಟಾಗುವುದು. ನೋವೆಂದರೆ 'ಇತ್ತಿಲ್ಲ ಇತ್ತ' ಎಂದು ಹಾದಿ ತೋರಿಸುವ ಸುಟ್ಟ ಬೆರಳು. ಈ ಬೆಲೆಯನ್ನರಿತವ ಅಂತನು.

ಒಂದೇ ನೋವಿಗೆ ಹಲವೊಂದು ಹೆಸರಿರುವವು. ತಿಳಿವಿನ ನೋವಿಗೆ ತಪ್ಪೆಂದೂ ; ನುಡಿಯ ನೋವಿಗೆ ಹುಸಿತೆಂದೂ ; ನಡೆಯ ನೋವಿಗೆ ಕೇಡೆಂದೂ ; ಎದೆಯ ನೋವಿಗೆ ದುಗುಡವೆಂದೂ ; ಒಗೆತನದ ನೋವಿಗೆ ಹಗೆತನವೆಂದೂ ಹೆಸರುಂಟು. ತಪ್ಪು ಒಪ್ಪಾಗಲಿಕ್ಕೂ, ಹುಸಿಯು ಹುರುಳಾಗಲಿಕ್ಕೂ, ಕೇಡು ಒಳಿತಾಗಲಿಕ್ಕೂ, ದುಗುಡ ಸೊಗಸಾಗಲಿಕ್ಕೂ, ಹಗೆ ನಗೆಯಾಗಲಿಕ್ಕೂ, ನೋವಿನ ನೆರವು ಬೇಕು. ಮೈಕೈ ನೋವು ಮಕ್ಕಳುಮರಿಗೂ ತಿಳಿಯುವುದು. ಮುಂದ ಮುಂದಿನ ನೋವು ಮುಪ್ಪಿನವರಿಗೂ ಮುಸುಮುಸುಕು, ಆ ನೋವನ್ನರಿತವನೇ ಅಂತನು.

ಕಲ್ಲು ಮಣ್ಣಿಗೆ ಮೈಕೈ ನೋವಿಲ್ಲ; ಮನಮಾತಿನ ನೋವಿಲ್ಲ; ತಿಳಿವರಿವಿನ ನೋವಿಲ್ಲ; ಕೂಟದ ಹಿಗ್ಗಿಲ್ಲ; ಬೆಟ್ಟದ ತಗ್ಗಿಲ್ಲ; ಈ ಹಿಗ್ಗಿಲ್ಲದ ಇರುವು ಬೇಡ ಬೇಡ, ಇದನ್ನರಿತವನೇ ಅರಿತನು.

ಮೈಕೈ ನೋವಿನ ಅರಿವಿನಿಂದ ಕಲ್ಲು ಮಣ್ಣು ಗಿಡಗಂಟೆಯಾಯಿತು. ಗಿಡಗಂಟೆಗೆ ಮೈಕೈ ನೋವಿನ ಪರಿವೆಯುಂಟು; ಮನಮಾತಿನ ಪರಿವೆಯಿಲ್ಲ; ತಿಳಿವರಿವಿನ ಪರಿವೆಯಿಲ್ಲ; ಆಗಿದ ತಗ್ಗು ತಾನೇ ಮುಚ್ಚಿಕೊಳ್ಳದು; ಕಚ್ಚಿದ ಗಿಡವು ತನ್ನನ್ನು ಮುಚ್ಚಿಕೊಳ್ಳುವುದು. ಗಿಡಗಂಟೆಗೆ ಮೈಕೈ ಕೂಟದ ಹಿಗ್ಗುಂಟು; ಮೈಕೈ ಬೇಟದ ತಗ್ಗುಂಟು, ತಗ್ಗು ತಿಳಿಯದಿದ್ದರೆ ಹಿಗ್ಗು ಹುಟ್ಟದು, ಇದನ್ನರಿತವನೇ ಅರಿತನು.

ಮೈಕೈ ಪರಿವೆಯು ಮೇರೆ ಮೀರಿ, ಮನಮಾತಿನ ಮಿಂಚನ್ನು ಕೊಂಚ ಕಂಡು, ಆ ಹೊರ ಬಲದ ಹೊಲದಲ್ಲಿ ಹಾರಾಡಿ, ಚೀರಾಡಿ, ಅರಿವಿನ ಮರವೆಯಾಗಿ, ಪರಿವೆಯ ಪರಿವೆ ಹಾರಿ, ಹಾಡಿದ್ದೇ ಹಾಡಿ, ಮಾಡಿದ್ದೇ ಮಾಡಿ, ಹುಳುಹುಪ್ಪಡಿ ಮೊದಲುಗೊಂಡು ಎತ್ತು ಕತ್ತೆ ಕಡೆಯಾಗಿ ಮನದ ಪರಿವೆಂದು ಒಂದು ಸುಳಿವಿಯಲ್ಲಿ ಸುತ್ತು ಸುತ್ತಾಡುತ್ತಿರುವವು.

ಹುಳುಗಳ ಅಪ್ಪಾಟ, ಹಸುಗಳ ಓಡಾಟ, ಹಕ್ಕಿಗಳ ಹಾರಾಟ-ಇವೆಲ್ಲ ಆ ಹೊಸ ಬಲದ ಹಿಗ್ಗಿನ ಉಗ್ಗು, ಮೈಕೈ ಅರಿವಿದ್ದು ಪರಿವೆ ಕಳೆದುಕೊಂಡು, ಆ ಹೊಸಗಸುವಿನ ಹಿಗ್ಗಿಗಾಗಿ ಹಾತೊರೆಯುವವು, ಅದನ್ನು ತೋರಿಸಲಿಕ್ಕೆ ನೋವು ನೆರವಾಗುವದು. ಕಟ್ಟಿದ ಚಿಗರಿ, ಅಟ್ಟಿದ ಹುಲಿ ಈ ಮಾತಿಗೆ ಇವೇ ಸಾಕ್ಷಿ, ಇದನ್ನರಿತವನೇ ಅರಿತನು.

ಮನದಿಂದಾದ ಮನವನು, ಅಣುವಿಗಾಗಿ ಅಳುಕದ್ದು ಮಣ್ಣು ಹೆಂಟೆ; ತನುವಿಗಾಗಿ ಅಳುಕುವುದು ಗಿಡಗಂಟೆ; ಅಸುವಿಗಾಗಿ ಅಳುಕುವದು ಹಸುಮನಕ್ಕಾಗಿ ಅಳುಕುವನು ಮಾನವ, ಉಗ್ಗಿದರೇನು ತಗ್ಗಿದರೇನು ಹಿಗ್ಗದ ಹೊರತು? ತಗ್ಗಿ ಉಗ್ಗಿ ಹಿಗ್ಗು ಹುಡುಕಬೇಕು; ಹುಡುಕದವ ಮಾನವನಲ್ಲ. ಹಿಗ್ಗಿಲ್ಲದೆ, ತಗ್ಗುವುದು ಮರುಳು, ತಗ್ಗಿ ಹಿಗ್ಗಿನ ಹಾದಿ ಹಿಡಿಯುವುದೇ ಹುರುಳು, ಇದನ್ನರಿತವನೆ ಅರಿತನು.

ಇದನ್ನಾರೆಂದರು ಆರೆಂದರು ಎಂದು ಕೇಳಲಾಗಿ 'ನಾ ನಾ ನಾ ಎಂದಂದಿತೊಂದು ದನಿಯು, ಇದನ್ನರಿತವನೇ ಅರಿತನು.

ಓಂ ಶಾಂತಿಃ ಶಾಂತಿಃ ಶಾಂತಿಃ

('ವಿಚಾರ ಮಂಜರಿ'ಯಿಂದ)